ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲಿ ಬಾರದೆ ಇದ್ದಲ್ಲಿ ಅರ್ಜಿದಾರರನ್ನು ಹೊರತುಪಡಿಸಿ ಮೃತನ ಅವಲಂಬಿತರು ಯಾರೂ ಇಲ್ಲ ಎಂದು ಪರಿಗಣಿಸಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಕೈಗೊಳ್ಳಲಾಗುವುದು.

**ಕೆ. ಜಿ. ಜಾನ್ಸನ್,**
ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಉಡುಪಿ ಜಿಲ್ಲೆ, ಉಡುಪಿ

**ಪಿ.ಆರ್. 555**

## ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರ ನ್ಯಾಯಾಲಯದಲ್ಲಿ

**ಸಂಖ್ಯೆ: ಎಸ್‌ಡಿಕೆ/351/ಡಿಟಿಸಿಆರ್/2010-11, ದಿನಾಂಕ: 29–03–2012**

**ಉಪಸ್ಥಿತರು: ಬಿ.ವಿ.ಹೂವಪ್ಪ ಗೌಡ, ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.**

**ಫಿರ್ಯಾದುದಾರರು:**

ಪೊಲೀಸ್ ಉಪಾಧೀಕ್ಷಕರು, ವಿಶೇಷ ಪೊಲೀಸ್ ಠಾಣೆ, ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ದಳ, ಪಶ್ಚಿಮ ವಲಯ, ಮಂಗಳೂರು

**ಆರೋಪಿ:**

1) ಭೋಜ, ಬಿನ್:ದಿ:ಮುದರ,ಎಕ್ಕೂರು ಗುಡ್ಡೆ, ಕಂಕನಾಡಿ, ಮಂಗಳೂರು ತಾಲೂಕು .
2) ಸುರೇಂದ್ರ ಬಿನ್:ಬಾಬು ಮೇಸ್ತ್ರಿ, ಎಕ್ಕೂರು ನಡಿಗುತ್ತು ಮನೆ, ಕಂಕನಾಡಿ, ಮಂಗಳೂರು

**ವಾಹನದ ಮಾಲೀಕರು:**

ಶ್ರೀ.ಶಶೀಂದ್ರ ಬಿನ್:ಬಾಬು,ಡೋರ್ ನಂ:9–85–99
ನಡಿಗುತ್ತು ಕಂಪೌಂಡ್ ಎಕ್ಕೂರು ಕಂಕನಾಡಿ, ಮಂಗಳೂರು

**ಪ್ರಕರಣದ ಮುಖ್ಯಾಂಶಗಳು:**

ಪೊಲೀಸ್ ಉಪಾಧೀಕ್ಷಕರು,ವಿಶೇಷ ಪೊಲೀಸ್ ಠಾಣೆ,ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ದಳ, ಪಶ್ಚಿಮ ವಲಯ, ಮಂಗಳೂರು ಇವರು ದಿ:25–9–2008 ರಂದು ರಾತ್ರಿ 9–15 ಗಂಟೆ ಸಮಯಕ್ಕೆ ಮಾಹಿತಿ ಆಧಾರದಲ್ಲಿ ಮಂಗಳೂರು ತಾಲೂಕಿನ ತೊಕೊಟ್ಟು ಕಡೆಯಿಂದ ಮಹಾಕಾಳಿಪಡ್ಪು ಕಡೆಗೆ ಮೋಟಾರ್ ಸೈಕಲ್ ನಂ: KA–19–W–8370 ರಲ್ಲಿ ಅಕ್ರಮವಾಗಿ ಬಿಳಿ ಬಣ್ಣದ ಪ್ಲಾಸ್ಟಿಕ್ ಕ್ಯಾನಿನಲ್ಲಿ 15 ಲೀಟರು ಕಳ್ಳಭಟ್ಟಿ ಸಾರಾಯಿಯನ್ನು ಬಿಳಿ ಬಣ್ಣದ ಪಾಲಿಥೀನ್ ಚೀಲದಲ್ಲಿ ಕಟ್ಟಿಕೊಂಡು ಯಾವುದೇ ದಾಖಲೆಗಳು ಇಲ್ಲದೇ ಸಾಗಾಟ ಮಾಡುತ್ತಿರುವುದನ್ನು ಪತ್ತೆಹಚ್ಚಿ ,ಇದು ಕರ್ನಾಟಕ ಅಬಕಾರಿ ಕಾಯಿದೆ 32, 34ರಂತೆ ಅಪರಾಧ ಹಾಗೂ ಶಿಕ್ಷಾರ್ಹವಾಗಿರುವುದರಿಂದ, ಅರೋಪಿಗಳಾದ 1) ಭೋಜ, ಬಿನ್: ದಿ:ಮುದರ,ಎಕ್ಕೂರು ಗುಡ್ಡೆ, ಕಂಕನಾಡಿ,ಮಂಗಳೂರು ತಾಲೂಕು 2) ಸುರೇಂದ್ರ ಬಿನ್:ಬಾಬು ಮೇಸ್ತ್ರಿ, ಎಕ್ಕೂರು ನಡಿಗುತ್ತು ಮನೆ, ಕಂಕನಾಡಿ,ಮಂಗಳೂರು ತಾಲೂಕು ಇವರುಗಳ ವಿರುದ್ಧ ವಿಶೇಷ ಪೊಲೀಸ್ ಠಾಣೆ , ಅಬಕಾರಿ ಮತ್ತು ಲಾಟರಿ ನಿಷೇಧ ದಳ, ಮಂಗಳೂರು ಇವರ ಕ್ರೈಂ ಸಂ: 0252/2008 ದಿ:26–9–2008ರಂತೆ ಮೊಕದ್ದಮೆ ದಾಖಲಿಸಿಕೊಂಡು, ಪ್ರಕರಣವನ್ನು ಕಾರ್ಯವ್ಯಾಪ್ತಿಯ ಪೊಲೀಸ್ ಉಪ ನಿರೀಕ್ಷಕರು, ಕಾನೂನು ಮತ್ತು ಶಿಸ್ತು , ದಕ್ಷಿಣ ಪೊ.ಠಾಣೆ ಇವರಿಗೆ ಹಸ್ತಾಂತರಿಸಿರುತ್ತಾರೆ. ಪ್ರಕರಣದ ಸೊತ್ತು ಕಡತವನ್ನು ವಿಲೇಯ ಮುಂದಿನ ಕಾನೂನು ಕ್ರಮದ ಬಗ್ಗೆ ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,ದ.ಕ ಜಿಲ್ಲೆ ಮಂಗಳೂರುರವರಿಂದ ದಿ:24–6–2011 ರ ಅದೇಶದಂತೆ ಪೊಲೀಸ್ ಉಪ ನಿರೀಕ್ಷಕರು, ಕಾನೂನು ಮತ್ತು ಶಿಸ್ತು, ದಕ್ಷಿಣ ಪೊ.ಠಾಣೆ ಇವರು ಅಬಕಾರಿ ಇಲಾಖೆಯ ಪರ ಅಬಕಾರಿ ನಿರೀಕ್ಷಕರು, ಮಂಗಳೂರು ದಕ್ಷಿಣ ವಲಯ–2 ಇವರಿಗೆ ಹಸ್ತಾಂತರಿಸಿರುತ್ತಾರೆ.

**ಜಪ್ತುಪಡಿಸಿದ ಸೊತ್ತುಗಳು ಈ ಕೆಳಗಿನಂತಿವೆ:**

1) ಮೋಟಾರ್ ಸೈಕಲ್ ನೊಂದಣಿ ನಂ: KA–19–W–8370
2) ಬಿಳಿ ಬಣ್ಣದ ಪಾಲಿಥೀನ್ ಚೀಲದಲ್ಲಿ ತುಂಬಿಸಿದ್ದ ಬಿಳಿ ಕ್ಯಾನಿನಲ್ಲಿರುವ 15 ಲೀಟರು ಕಳ್ಳಭಟ್ಟಿ ಸಾರಾಯಿ (ಇದರಿಂದ 180 ಎಂಎಲ್‌ನಷ್ಟು ಕಳ್ಳಭಟ್ಟಿ ಸಾರಾಯಿಯನ್ನು ಮಾದರಿಗಾಗಿ ತೆಗೆಯಲಾಗಿದೆ)

ಪ್ರಕರಣಕ್ಕೆ ಸಂಬಂಧಿಸಿದಂತೆ ಕಳ್ಳಭಟ್ಟಿ ಸಾರಾಯಿಯ ಮಾದರಿಗಳನ್ನು ರಾಸಾಯನಿಕ ವಿಶ್ಲೇಷಣೆಗೆ ಪೊಲೀಸ್ ಅಧಿಕಾರಿಗಳೇ ಒಳಪಡಿಸಿದ್ದು ಕರ್ನಾಟಕ ಸರ್ಕಾರದ ಸಹಾಯಕ ರಾಸಾಯನ ಪರೀಕ್ಷಕರು ,ಮಂಗಳೂರು ವಲಯ,ಮಂಗಳೂರು ಇವರ ವರದಿ ಸಂ:ಇ–524 ದಿ:5–2–2008 ರಲ್ಲಿ ಕಳ್ಳಭಟ್ಟಿಯಲ್ಲಿ ಮದ್ಯಸಾರದ ಪ್ರಮಾಣ 25.0% ಹಾಗೂ ಮಾದರಿ ಗಳು ಕಶ್ಮಲಯುಕ್ತವಾಗಿದ್ದು ,ಮಾನವ ಸೇವನೆಗೆ ಯೋಗ್ಯವಾಗಿರುವುದಿಲ್ಲ ಎಂದು ದೃಡೀಕರಣ ಪತ್ರವನ್ನು ನೀಡಿರುತ್ತಾರೆ. ಹಾಗೂ ಜಪ್ತು ಪಡಿಸಿಕೊಂಡ ವಾಹನದ ಬಿ ರಿಜಿಸ್ಟ್ರಾರ್ ಎಕ್ಸ್‌ಟ್ರಾಕ್ಟ್ ವರದಿಯನ್ನು ಪ್ರಕರಣದ

ತನಿಖಾದಿಕಾರಿಗಳು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ದ,.ಕ ಜಿಲ್ಲೆ ಮಂಗಳೂರು ಇವರಿಂದ ಪಡೆದು ಸಲ್ಲಿಸಿದ್ದು, ಸದ್ರಿ ವರದಿಯಲ್ಲಿ ಶ್ರೀ.ಶಶೀಂದ್ರ ಬಿನ್:ಬಾಬು ,ಡೋರ್ ನಂ:9–85–99, ನಡಿಗುತ್ತು ಕಂಪೌಂಡ್ ಎಕ್ಕೂರು ಕಂಕನಾಡಿ, ಮಂಗಳೂರು ತಾಲೂಕು ಇವರು ವಾಹನದ ನೊಂದಾಯಿತ ಮಾಲೀಕರಾಗಿರುವುದಾಗಿ ಹಾಗೂ ಐ.ಸಿ.ಐ.ಸಿ.ಐ ಬ್ಯಾಂಕ್ ಲಿಮಿಟೆಡ್, ಕೆ.ಎಸ್.ರಾವ್ ರೋಡ್, ಮಂಗಳೂರು ಇವರು ವಾಹನದ ಹೆಚ್.ಪಿ.ಎ.ದಾರರಾಗಿರುವುದಾಗಿ ದೃಡಿಕೃತ ವಾಗಿರುತ್ತದೆ. ಪ್ರಕರಣದ ತನಿಖಾಧಿಕಾರಿಯಾದ ಅಬಕಾರಿ ನಿರೀಕ್ಷಕರು, ಮಂಗಳೂರು ದಕ್ಷಿಣ ವಲಯ–2 ಇವರು ದಾಖಲಾತಿಗಳ ಪ್ರತಿಗಳೊಂದಿಗೆ ದಿ:30–1–2012ರಂದು ಪ್ರಾಧಿಕಾರಕ್ಕೆ ಸಲ್ಲಿಸಿರುವ ವರದಿಯಲ್ಲಿ ಜಪ್ತುಪಡಿಸಿಕೊಳ್ಳಲಾದ ವಾಹನ ಮತ್ತು ಕಳ್ಳಭಟ್ಟಿ ಸಾರಾಯಿಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು, ಕಳ್ಳಭಟ್ಟಿ ಸಾರಾಯಿಯನ್ನು ಕ್ಯಾನು ಸಮೇತ ನಾಶಪಡಿಸಲು ಹಾಗೂ ವಾಹನವನ್ನು ವಿಲೇವಾರಿ ಮಾಡಲು ಅದೇಶಕ್ಕಾಗಿ ಕೋರಿರುತ್ತಾರೆ.

ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ,ದ.ಕ ಜಿಲ್ಲೆ ಮಂಗಳೂರು ಇವರು ನೀಡಿದ ಬಿ ಎಕ್ಸ್‌ಟ್ರಾಕ್ಟ್ ವರದಿಯಲ್ಲಿ ದೃಡೀಕರಿಸಲ್ಪಟ್ಟ ವಾಹನದ ಮಾಲೀಕರಾದ ಶ್ರೀ.ಶಶೀಂದ್ರ ಬಿನ್:ಬಾಬು, ಡೋರ್ ನಂ:9–85–99, ನಡಿಗುತ್ತು ಕಂಪೌಂಡ್ ಎಕ್ಕೂರು ಕಂಕನಾಡಿ, ಮಂಗಳೂರು ತಾಲೂಕು, ವಾಹನದ ಹೆಚ್.ಪಿ.ಎ ದಾರರಾದ ಐ.ಸಿ.ಐ.ಸಿ.ಐ ಬ್ಯಾಂಕ್ ಲಿಮಿಟೆಡ್, ಕೆ.ಎಸ್.ರಾವ್ ರೋಡ್, ಮಂಗಳೂರು ಮತ್ತು ಪ್ರಕರಣದ ಮುಖ್ಯ ಅರೋಪಿಗಳಾದ ಭೋಜ, ಬಿನ್:ದಿ: ಮುದರ,ಎಕ್ಕೂರು ಗುಡ್ಡೆ, ಕಂಕನಾಡಿ,ಮಂಗಳೂರು ತಾಲೂಕು 2) ಸುರೇಂದ್ರ ಬಿನ್:ಬಾಬು ಮೇಸ್ತ್ರಿ, ಎಕ್ಕೂರು ನಡಿಗುತ್ತು ಮನೆ, ಕಂಕನಾಡಿ,ಮಂಗಳೂರು ತಾಲೂಕು ಇವರುಗಳಿಗೆ ಕರ್ನಾಟಕ ಅಬಕಾರಿ ಕಾಯಿದೆ 1965 ಕಲಂ 43ಬಿ ಪ್ರಕಾರ ದಿ:14–2–2012 ರಂದು ನೊಂದಾಯಿತ ಅಂಚೆಯ ಮೂಲಕ ನೀಡಲಾದ ಕಾರಣ ಕೇಳಿ ನೋಟಿಸು ಅರೋಪಿಗಳಲ್ಲಿ ಓರ್ವರಾದ ಸುರೇಂದ್ರ ಎಂಬವರಿಗೆ ದಿ:18–2–2012ರಂದು ಜ್ಯಾರಿಯಾಗಿದ್ದು ಇನ್ನೋರ್ವ ಅರೋಪಿತ ವ್ಯಕ್ತಿ ಮತ್ತು ವಾಹನದ ಮಾಲೀಕರಿಗೆ ಸದ್ರಿ ನೋಟಿಸು ಜ್ಯಾರಿಯಾಗದೇ ಅಂಚೆ ಷರಾದೊಂದಿಗೆ ವಾಪಸ್ಸು ಬಂದಿರುತ್ತದೆ.

1965ನೇ ಕರ್ನಾಟಕ ಅಬಕಾರಿ ಕಾಯ್ದೆ ಅಡಿಯಲ್ಲಿ ಪ್ರಕರಣವನ್ನು ದಾಖಲು ಮಾಡುವಾಗ ಆರೋಪಿಯು ಪತ್ತೆಯಾಗದಿದ್ದಲ್ಲಿ, ಅಥವಾ ಪತ್ತೆಯಾಗುವ ಸಾಧ್ಯತೆ ಇಲ್ಲದಿದ್ದಲ್ಲಿ ಪ್ರಕರಣವನ್ನು ಪತ್ತೆಹಚ್ಚಿದ ಒಂದು ತಿಂಗಳಲ್ಲಿ ಯಾವುದೇ ವ್ಯಕ್ತಿಯು ಪ್ರಾಧಿಕಾರದ ಮುಂದೆ ಹಾಜರಾಗಿ ಅಪರಾಧದಲ್ಲಿ ಜಪ್ತಾಗಿರುವ ಸೊತ್ತುಗಳು ತಮ್ಮದೆಂದು ಅವುಗಳು ಕಾನೂನು ಬದ್ಧವಾಗಿದೆಯೆಂದು ಸಾಕ್ಷಧಾರಗಳೊಂದಿಗೆ ಸಾಬೀತು ಪಡಿಸದೇ ಇದ್ದಲ್ಲಿ, ಸದ್ರಿ ಸೊತ್ತುಗಳು, ಅಬಕಾರಿ ಕಾಯ್ದೆ ಕಲಂ 43ಅ ಅಡಿಯಲ್ಲಿ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿರುವ ಸೊತ್ತುಗಳಾಗಿದ್ದಲ್ಲಿ ಅಂತಹ ಸೊತ್ತುಗಳನ್ನು ಕಲಂ 43ಸಿ ಅಡಿಯಲ್ಲಿ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುತ್ತದೆ.

ಪ್ರಾಧಿಕಾರದಲ್ಲಿ ಲಭ್ಯವಿರುವ ದಾಖಲಾತಿಗಳ ಪ್ರಕಾರ ದಿನಾಂಕ 25–9–2008 ರಂದು ಅಕ್ರಮವಾಗಿ 15 ಲೀಟರು ಕಳ್ಳಭಟ್ಟಿ ಸಾರಾಯಿಯನ್ನು ಮೋಟಾರ್ ಸೈಕಲ್ ನೊಂದಣಿ ನಂ: KA–19–W–8370ರಲ್ಲಿ ಸಾಗಾಟ ಮಾಡುತ್ತಿರುವುದನ್ನು ಪತ್ತೆಹಚ್ಚಿ, ಪೊಲೀಸ್ ಉಪಾಧೀಕ್ಷಕರು, ವಿಶೇಷ ಪೊಲೀಸ್ ಠಾಣೆ, ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ದಳ, ಪಶ್ಚಿಮ ವಲಯ ,ಮಂಗಳೂರು ಇವರು ಕ್ರೈಂ ಸಂ:252/2008, ದಿ:26–9–2008ರಂತೆ ಪ್ರಕರಣ ದಾಖಲಿಸಿಕೊಂಡು ಪೊಲೀಸ್ ಉಪ ನಿರೀಕ್ಷಕರು, (ಕಾನೂನು ಮತ್ತು ಶಿಸ್ತು) ದಕ್ಷಿಣ ಪೊಲೀಸ್ ಠಾಣೆ ಮಂಗಳೂರು ಇವರಿಗೆ ಮುಂದಿನ ತನಿಖೆಯ ಬಗ್ಗೆ ಹಸ್ತಾಂತರಿಸಿ ತದನಂತರದಲ್ಲಿ ಸೊತ್ತುಗಳನ್ನು ವಿಲೇಯ ಬಗ್ಗೆ ಅಬಕಾರಿ ಇಲಾಖೆಗೆ ಹಸ್ತಾಂತರಿಸಲಾಗಿರುತ್ತದೆ. ಮತ್ತು ಪ್ರಕರಣದಲ್ಲಿ ಜಪ್ತು ಮಾಡಲ್ಪಟ್ಟಿರುವ ವಸ್ತು ರಾಸಾಯನಿಕ ತಜ್ಞರ ವರದಿಯಂತೆ ಕಳ್ಳಭಟ್ಟಿಯಾಗಿರುತ್ತದೆ. ಹಾಗೂ ವಾಹನದ ಮಾಲೀಕತ್ವದ ಬಗ್ಗೆ ಸಂಬಂಧಿಸಿದ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಂದ ಪಡೆದ ಬಿ ರಿಜಿಸ್ಟ್ರಾರ್ ಎಕ್ಸ್‌ಟ್ರಾಕ್ಟ್ ವರದಿಯಲ್ಲಿ ದೃಡೀಕೃತ ವಾದ ವಾಹನದ ಮಾಲೀಕರಿಗೆ, ವಾಹನದ ಹೆಚ್.ಪಿ.ದಾರರಿಗೆ ಮತ್ತು ಅರೋಪಿತ ವ್ಯಕ್ತಿಗಳಿಗೆ ಪ್ರಾಧಿಕಾರದಿಂದ ಅಬಕಾರಿ ಕಾಯಿದೆ 43 ಬಿ ರಡಿಯಲ್ಲಿ ಕಾರಣ ಕೇಳಿ ನೋಟಿಸನ್ನು ನೊಂದಾಯಿತ ಅಂಚೆಯ ಮೂಲಕ ನೀಡಲಾಗಿದ್ದರೂ ಸದ್ರಿಯವರಿಂದ ಯಾವುದೇ ಸಮಜಾಯಿಷಿ ಉತ್ತರ ಈ ಪ್ರಾದಿಕಾರದಲ್ಲಿ ಸ್ವೀಕೃತವಾಗಿರುವುದಿಲ್ಲ. ಪ್ರಕರಣ ದಾಖಲಾಗಿ 3 ವರ್ಷ 5 ತಿಂಗಳುಗಳು ಕಳೆದಿದ್ದು ವಾಹನದ ಬಿಡುಗಡೆ ಬಗ್ಗೆ ಯಾರೊಬ್ಬರೂ ಪ್ರಯತ್ನಿಸದೇ ಇರುವುದರಿಂದ ಇದೊಂದು 'ವಾರೀಸುದಾರರು ಇಲ್ಲದ ಪ್ರಕರಣ' ಎಂದು ಪ್ರಾದಿಕಾರವು ಮನಗಂಡು ವಾಹನದ ಮುಟ್ಟುಗೋಲು ನಡವಳಿ ಬಗ್ಗೆ ತೀರ್ಮಾನ ತೆಗೆದು ಕೊಳ್ಳ ಬೇಕಾಗಿರುತ್ತದೆ.

ಮೇಲಿನ ವಿದ್ಯಾಮಾನಗಳನ್ನು ಪರಿಶೀಲಿಸಿ ವಾಹನದ ಮುಟ್ಟುಗೋಲು ನಡವಳಿ ವಿಚಾರಣೆಯನ್ನು ಪ್ರಾರಂಬಿಸಿ, ಪ್ರಕರಣ ಪತ್ತೆಹಚ್ಚಿದ ಬಗ್ಗೆ ಪೊಲೀಸ್ ಉಪಾಧೀಕ್ಷಕರಾದ ಶ್ರೀ.ಜೆ.ಪಾಪಯ್ಯ ಹಾಗೂ ಪ್ರಕರಣದ ತನಿಖಾಧಿಕಾರಿಗಳಾದ ಶ್ರೀ.ಎಂ.ಕೇಶವಮೂರ್ತಿ ಅಬಕಾರಿ ನಿರೀಕ್ಷಕರು, ಮಂಗಳೂರು ದಕ್ಷಿಣ ವಲಯ–2 ಇವರುಗಳನ್ನು ಸರ್ಕಾರದ ಪರ ಸಾಕ್ಷಿ ವಿಚಾರಣೆಗೆ ಒಳಪಡಿಸಲಾಗಿ ಪ್ರಕರಣ ಪತ್ತೆಹಚ್ಚಿರುವ ಬಗ್ಗೆ ಮತ್ತು ತನಿಖೆ ಕೈಗೊಂಡ ಬಗ್ಗೆ ಸಾಕ್ಷ್ಯಾಧಾರ ಹೇಳಿಕೆಗಳನ್ನು ಪಡೆಯಲಾಗಿರುತ್ತದೆ. ವಾಹನದ ಮಾಲೀಕರಾಗಲೀ, ಮಾಲೀಕರ ಪರ ಪ್ರತಿನಿಧಿಗಳಾಗಲೀ ಪ್ರಾದಿಕಾರದ ಮುಂದೆ ಹಾಜರಾಗದೇ ಇದ್ದುದರಿಂದ, ಪ್ರತಿ ರಕ್ಷಾ ಸಾಕ್ಷಿ ಹೇಳಿಕೆಯನ್ನು ಪಡೆಯಲಾಗಿರುವುದಿಲ್ಲ.

ಈ ಪ್ರಕರಣದಲ್ಲಿ ಸರ್ಕಾರದ ಅಭಿಯೋಜನ ಪರ ಸಲ್ಲಿಸಿರುವ ಸಾಕ್ಷ್ಯಾಧಾರಗಳಿಂದ ಈ ಕೆಳಗಿನ ವಿವಾಧಾಂಶಗಳನ್ನು ತೀರ್ಮಾನಿಸುವುದು ಅಗತ್ಯವಾಗಿದ್ದು ಪರಿಶೀಲನಾಂಶಗಳು ಈ ಕೆಳಗಿನಂತಿರುತ್ತದೆ.

1) ದಿನಾಂಕ:25–9–2008ರಂದು ಮೋಟಾರ್ ಸೈಕಲ್ ನೊಂದಣಿ ನಂ:KA–19–W–8370 ಇದರ ಜೊತೆಯಲ್ಲಿ ಜಪ್ತುಪಡಿಸಿಕೊಳ್ಳಲಾದ ಸೊತ್ತು ಕಳ್ಳಭಟ್ಟಿ ಎಂಬ ಬಗ್ಗೆ ರಸಾಯನಿಕ ವಿಶ್ಲೇಷಣಾ ವರದಿಯಿಂದ ದೃಢೀಕೃತವಾಗಿದೆಯೇ?

2) ದಿನಾಂಕ: 25-9-2008ರಂದು ಮೋಟಾರ್ ಸೈಕಲ್ ನೊಂದಣಿ ನಂ:KA–19–W–8370 ಇದನ್ನು ಅಕ್ರಮವಾಗಿ ಕಳ್ಳಭಟ್ಟಿ ಸಾಗಾಣಿಕೆಗೆ ಬಳಸಲಾಗಿದೆಯೇ? ಮತ್ತು ವಾಹನವನ್ನು ಕರ್ನಾಟಕ ಅಬಕಾರಿ ಕಾಯಿದೆ ಮತ್ತು ನಿಯಮಗಳ ರೀತ್ಯಾ ಅಪರಾಧಕ್ಕೆ ಬಳಸಲಾಗಿದೆಯೇ?

3) ವಶಪಡಿಸಿಕೊಂಡಿರುವ ವಾಹನದ ಮಾಲೀಕರು ತನಗೆ ತಿಳಿಯದೇ ಕರ್ನಾಟಕ ಅಬಕಾರಿ ಕಾಯಿದೆಯಡಿ ಕಳ್ಳಭಟ್ಟಿ ಸಾಗಾಣಿಕೆಗೆ ವಾಹನವನ್ನು ಉಪಯೋಗಿಸಲ್ಪಟ್ಟಿತ್ತು ಎಂಬುದನ್ನು ಸಾಬೀತು ಪಡಿಸಿದ್ದಾರೆಯೇ? ಅಥವಾ ಇಲ್ಲವೇ?

4) ಜಪ್ತು ಪಡಿಸಲಾಗಿರುವ ವಾಹನ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆಯೇ ಅಥವಾ ಇಲ್ಲವೇ?

ಒಂದು ಮತ್ತು ಎರಡನೇ ಅಂಶಗಳನ್ನು ಗುಣಾತ್ಮಕವಾಗಿ, ಮೂರನೇ ಅಂಶವನ್ನು ನಕರಾತ್ಮಕವಾಗಿ ಹಾಗೂ ನಾಲ್ಕನೇ ಅಂಶವನ್ನು ಅಂತಿಮ ಆದೇಶದಂತೆ.

ಪ್ರಕರಣದಲ್ಲಿ ಜಪ್ತುಪಡಿಸಿಕೊಂಡ ಕಳ್ಳಭಟ್ಟಿ ಮಾದರಿಗಳನ್ನು ರಾಸಾಯನಿಕ ವಿಶ್ಲೇಷಣೆಗೆ ಒಳಪಡಿಸಲಾಗಿದ್ದು, ಕರ್ನಾಟಕ ಸರ್ಕಾರದ ಸಹಾಯಕ ರಾಸಾಯನ ಪರೀಕ್ಷಕರು ಮಂಗಳೂರು ವಲಯ, ಮಂಗಳೂರು ಇವರ ವರದಿ ಸಂ:ಇ–524 ದಿ:5–2–2008 ರಲ್ಲಿ ಕಳ್ಳಭಟ್ಟಿಯಲ್ಲಿ ಮದ್ಯಸಾರದ ಪ್ರಮಾಣ 25.0% ಹಾಗೂ ಮಾದರಿಗಳು ಕಶ್ಮಲಯುಕ್ತವಾಗಿದ್ದು,ಮಾನವ ಸೇವನೆಗೆ ಯೋಗ್ಯವಾಗಿರುವುದಿಲ್ಲ ಎಂದು ದೃಡೀಕರಿಸಲ್ಪಟ್ಟಿರುವುದರಿಂದ ಜಪ್ತುಪಡಿಸಿಕೊಂಡ ವಸ್ತುವು ಅಬಕಾರಿ ಸೊತ್ತು (ಕಳ್ಳಭಟ್ಟಿ)ಆಗಿರುವುದು ಸಾಭೀತಾಗಿರುವುದರಿಂದ ಒಂದನೇ ಅಂಶವನ್ನು ಗುಣಾತ್ಮಕವಾಗಿ ಪರಿಗಣಿಸಲಾಗಿದೆ.

ಪ್ರಕರಣದ ಎಲ್ಲಾ ದಾಖಲಾತಿಗಳನ್ನು ಹಾಗೂ ಪ್ರಾ.ಸ–1 ಮತ್ತು 2ರವರು ಪ್ರಾಧಿಕಾರದ ಮುಂದೆ ನೀಡಿರುವ ಸಾಕ್ಷಿಯನ್ನು ಅವಲೋಕಿಸಿ ,ಕಳ್ಳಭಟ್ಟಿ ಸಾಗಾಣಿಕೆ ಸಂದರ್ಭದಲ್ಲಿ ಬಳಸಿಕೊಂಡು ಜಪ್ತುಪಡಿಸಿಕೊಳ್ಳಲಾದ ವಾಹನದ ಮಾಲೀಕರಿಗೆ ಅಬಕಾರಿ ಕಾಯಿದೆ ಕಲಂ 43 ಬಿ ರಡಿ ನೋಟಿಸು ನೀಡಲಾಗಿದ್ದರೂ, ವಾಹನದ ಮಾಲೀಕರು/ ಸುಪರ್ಧಿದಾರರಾಗಲೀ, ಅವರ ಪ್ರತಿನಿಧಿಗಳಾಗಲೀ ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ಬೇಡಿಕೆ/ ಅಕ್ಷೇಪಣೆಗಳನ್ನು ಮಂಡಿಸದೇ ಇರುವುದನ್ನು ಗಮನಿಸಿ, ಅಪರಾಧ ಸ್ಥಳದಲ್ಲಿ ಮಹಜರು ಜರುಗಿಸಿ ಸೊತ್ತುಗಳನ್ನು ಜಪ್ತು ಪಡಿಸಿಕೊಂಡು ಪ್ರಕರಣ ದಾಖಲಿಸಿಕೊಂಡ ಅಂಶಗಳನ್ನು ಪರಿಗಣಿಸಿ ವಾಹನ ಮೋಟಾರ್ ಸೈಕಲ್ ನೊಂದಣಿ ನಂ: KA–19–W–8370 ನ್ನು ಅಕ್ರಮ ಕಳ್ಳಭಟ್ಟಿ ಸಾಗಾಣಿಕೆಗೆ ಬಳಸಿರುವುದು ಸಾಭೀತಾಗಿರುವುದರಿಂದ ಎರಡನೇ ಅಂಶವನ್ನು ಗುಣಾತ್ಮಕವಾಗಿ ಪರಿಗಣಿಸಲಾಗಿದೆ.

ಇಂತಹ ಅಕ್ರಮ ಕಳ್ಳಭಟ್ಟಿ ಸಾರಾಯಿ ಸಾಗಾಟ ತನ್ನ ತಿಳುವಳಿಕೆಗೆ ಬಾರದೇ ನಡೆದಿದೆ ಮತ್ತು ವಾಹನವನ್ನು ಸದ್ರಿ ಅಕ್ರಮ ಸಾಗಾಣಿಕೆಗೆ ಬಳಸಲಾಗಿರುವುದಿಲ್ಲ ಎಂಬುದನ್ನು ಸಾಕ್ಷದಾರಗಳೊಂದಿಗೆ ಸಾಭೀತುಪಡಿಸುವುದು ವಾಹನ ಮಾಲೀಕರ ಆದ್ಯ ಹೊಣೆಗಾರಿಕೆಯಾಗಿರುತ್ತದೆ. ಪ್ರಾಧಿಕಾರದಿಂದ ನೀಡಲಾದ ಕಾರಣ ಕೇಳಿ ನೋಟಿಸು ನೊಂದಾಯಿತ ಅಂಚೆಯ ಮೂಲಕ ಜ್ಯಾರಿಯಾಗಿದ್ದರೂ, ಸದ್ರಿ ನೋಟಿಸಿಗೆ ಯಾವುದೇ ಪ್ರತಿಕ್ರಿಯೆ ವ್ಯಕ್ತಪಡಿಸದೇ ಹಾಗೂ ಸುಮಾರು 3 ವರ್ಷಗಳಿಂದ ಮೇಲ್ಪಟ್ಟು ವಾಹನ ಇಲಾಖಾ ಸುಪರ್ಧಿಯಲ್ಲಿದ್ದರೂ ತನ್ನ ಮಾಲೀಕತ್ವ ನಿರೂಪಿಸಿ ಯಾರೊಬ್ಬರೂ ಬೇಡಿಕೆ/ ಪ್ರತಿಕ್ರಿಯೆ ನಿರೂಪಿಸದೇ ಇರುವುದರಿಂದ ವಾಹನದ ಮಾಲೀಕರು/ಸುಪರ್ಧಿ ಹೊಂದಿರುವವರು ತಮ್ಮ ನಿರಾಪರಾಧಿತ್ವವನ್ನು ಸಾಬೀತುಪಡಿಸಲು ವಿಫಲರಾದ ಕಾರಣ, ಸದ್ರಿ ವಾಹನವನ್ನು ಅಕ್ರಮ ಕಳ್ಳಭಟ್ಟಿ ಸಾಗಾಣಿಕೆಗೆ ಬಳಸಿರುವುದು ನಿಸ್ಸಂದೇಹವಾಗಿ ಸಾಭೀತಾಗಿರುತ್ತದೆ. ಮೇಲಿನ ಕಾರಣಗಳಿಂದ ಮೂರನೇಯ ಅಂಶವನ್ನು ನಕಾರಾತ್ಮಕವಾಗಿ ಪರಿಗಣಿಸಿದೆ.

ಮೇಲಿನ ಎಲ್ಲಾ ಅಂಶಗಳಿಂದ ಮಹಜರು ಸಾಕ್ಷಿಗಳ ವಿಚಾರಣೆ ಮತ್ತು ಲಭ್ಯವಿರುವ ದಾಖಲಾತಿಗಳಿಂದ ಹಾಗೂ ಪ್ರಕರಣದಲ್ಲಿ ಜಪ್ತುಪಡಿಸಿದ ಕಳ್ಳಭಟ್ಟಿಯಲ್ಲಿ ಮದ್ಯಸಾರದ ಅಂಶ ಇರುವುದು ವಿಶ್ಲೇಷಣಾ ವರದಿಯಿಂದ ದೃಡಪಟ್ಟಿರುವುದರಿಂದ ಈ ಪ್ರಕರಣದಲ್ಲಿ ಅಕ್ರಮ ವಸ್ತುಗಳನ್ನು ಸಾಗಾಟ ಮಾಡಲು ಅನುಕೂಲಕರವಾಗಿ ಬಳಸಿಕೊಳ್ಳಲಾಗಿದೆ ಎಂದು ಖಚಿತ ಪಡಿಸಿಕೊಂಡು ಜಪ್ತು ಪಡಿಸಲಾಗಿರುವ ಮೋಟಾರ್ ಸೈಕಲ್ ನೊಂದಣಿ ನಂ:KA–19–W–8370 ನ್ನು ಮತ್ತು 15 ಲೀಟರು ಕಳ್ಳಭಟ್ಟಿ ಸಾರಾಯಿಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಕ್ಯಾನು ಸಮೇತ ಕಳ್ಳಭಟ್ಟಿ ಸಾರಾಯಿಯನ್ನು ನಾಶಪಡಿಸುವುದು ಹಾಗೂ ವಾಹನವನ್ನು ವಿಲೇವಾರಿ ಮಾಡುವುದು ಸೂಕ್ತವೆಂದು ಪ್ರಾಧಿಕಾರವು ತೀರ್ಮಾನಿಸಿ, ಈ ಕೆಳಕಂಡ ಅದೇಶ .

## ಆದೇಶ

ಬಿ.ವಿ.ಹೂವಪ್ಪ ಗೌಡ, ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,ದ.ಕ.ಜಿಲ್ಲೆ,ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲ0 43ಎ ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ,ನಿಯಮ 43 ಬಿ ರಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿದ ನಂತರ ಪೊಲೀಸ್ ಉಪಾಧೀಕ್ಷಕರು, ವಿಶೇಷ ಪೊಲೀಸ್ ಠಾಣೆ, ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ದಳ, ಮಂಗಳೂರು ಇವರ ತಕ್ಷೀರು ಸಂ: 0252/2008 ದಿ:26–9–2008ರಲ್ಲಿ ಜಪ್ತು ಪಡಿಸಿಕೊಂಡಿರುವ ಮೋಟಾರ್ ಸೈಕಲ್ ನೊಂದಣಿ ನಂ:KA–19–W–8370 (ಚಾಸೀಸ್

ನಂ:MB8NF4BCG78130796 ಇಂಜಿನ್ ನಂ:F479184614) ನ್ನು ನಿಯಮ 43ಸಿ ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿ ಕೊಂಡು ಬಹಿರಂಗ ಹರಾಜಿನ ಮೂಲಕ ವಿಲೇವಾರಿ ಮಾಡಲು ಆದೇಶ ನೀಡಿರುತ್ತೇನೆ.

ಹಾಗೂ ಪ್ರಕರಣದಲ್ಲಿ ಜಪ್ತುಪಡಿಸಲಾದ 15 ಲೀಟರು ಕಳ್ಳಭಟ್ಟಿ ಸಾರಾಯಿ( ಮಾದರಿಗಳನ್ನು ಹೊರತುಪಡಿಸಿ)ಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಕ್ಯಾನು ಸಮೇತ ಕಳ್ಳಭಟ್ಟಿ ಸಾರಾಯಿಯನ್ನು ನಾಶಪಡಿಸಲು ಅದೇಶ ನೀಡಿರುತ್ತೇನೆ.

ಈ ಆದೇಶವನ್ನು ದಿ:29-03-2012ರಂದು ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು

ಈ ಆದೇಶವು ಇಂದಿನಿಂದ 30 ದಿವಸಗಳ ನಂತರ ಜ್ಯಾರಿಯಲ್ಲಿ ಬರುತ್ತದೆ.

**ಬಿ.ವಿ ಹೂವಪ್ಪ ಗೌಡ,**
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅನುಬಂಧ-I**

**ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ:-**

ಪ್ರಾ.ಸಾ-I: ಶ್ರೀ.ಪಾಪಯ್ಯ, ಪೊಲೀಸ್ ಉಪಾಧೀಕ್ಷಕರು, ವಿಶೇಷ ಪೊ.ಠಾಣೆ,ಅಲಾನಿ, ಪಶ್ಚಿಮ ವಲಯ, ಮಂಗಳೂರು

ಪ್ರಾ.ಸಾ-2: ಶ್ರೀ ಎಂ.ಕೇಶವ ಮೂರ್ತಿ,ಅಬಕಾರಿ ನಿರೀಕ್ಷಕರು ,ಮಂಗಳೂರು ದಕ್ಷಿಣ ವಲಯ-2

**ಅನುಬಂಧ-II**

**ಫಿರ್ಯಾದುದಾರರ ಪರ ಮಂಡಿಸಲಾದ ದಾಖಲೆಗಳು:-**

| | |
|---|---|
| ನಿಶಾನೆ ಪಿ-I | : ಮಹಜರು ಪ್ರತಿ , ನಿಶಾನೆ ಪಿ-1 ಎ ಅದರ ಮೇಲಿನ ಸಹಿ |
| ನಿಶಾನೆ ಪಿ-2 | : ಪ್ರಥಮ ಮಾಹಿತಿ ವರದಿ |
| ನಿಶಾನೆ ಪಿ-3 | : ಸೊತ್ತು ಪಟ್ಟಿ |
| ನಿಶಾನೆ ಪಿ-4 | : ಅಧಿಕೃತ ಅಧಿಕಾರಿಗಳ ದಿ:24-6-2011 ರ ಆದೇಶ |
| ನಿಶಾನೆ ಪಿ-5 | : ರಸಾಯನಿಕ ವಿಶ್ಲೇಷಣಾ ವರದಿ |
| ನಿಶಾನೆ ಪಿ-6 | : ವಾಹನದ ಬಿ ರಿಜಿಸ್ಟ್ರಾರ್ ಎಕ್ಸ್ ಟ್ರಾಕ್ಟ್ ವರದಿ |
| ನಿಶಾನೆ ಪಿ-7 | : ದಿ:30-1-2012ರ ತನಿಖಾ ವರದಿ, ನಿ.ಪಿ.-7 ಎ - ಅದರ ಮೇಲಿನ ಸಹಿ |

**ಅನುಬಂಧ-III**

**ವಾಹನ ಮಾಲೀಕರ ಪರವಾಗಿ ವಿಚಾರಣೆ ಮಾಡಲಾದ ಸಾಕ್ಷಿದಾರರು :-**

ಅರ್ಜಿದಾರರ ಹೇಳಿಕೆ :- - ಯಾವುದು ಇಲ್ಲ-

**ಅನುಬಂಧ-IV**

ವಾಹನ ಮಾಲೀಕರ ಪರವಾಗಿ ಗುರುತಿಸಲಾದ ದಾಖಲೆಗಳು :- - ಯಾವುದು ಇಲ್ಲ-

**ಬಿ.ವಿ ಹೂವಪ್ಪ ಗೌಡ,**
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಪಿ.ಆರ್. 530**

## ಪೊಲೀಸ್ ಇಲಾಖೆ

**ಪೊಲೀಸ್ ಕಮೀಷನರ್‌ರವರ ಕಛೇರಿ, ನಂ.1, ಇನ್‌ಫೆಂಟ್ರಿ ರಸ್ತೆ, ಬೆಂಗಳೂರು ನಗರ,**

**ಸಂಖ್ಯೆ. 10/ಅಸೂ/ಅಸಿಪಿ/ಸಂವಿ/2012, ದಿನಾಂಕ: 17ನೇ ಏಪ್ರಿಲ್ 2012.**

### ಅಧಿಸೂಚನೆ

ಬೆಂಗಳೂರು ನಗರವು ಎಲ್ಲಾ ರಂಗಗಳಲ್ಲೂ ಅತಿವೇಗದಿಂದ ಬೆಳೆಯುತ್ತಿದೆ. 1947ರಲ್ಲಿ ಪುಟ್ಟ ಪ್ರದೇಶವಾಗಿದ್ದು, ಕಳೆದ ಹಲವಾರು ವರ್ಷಗಳಲ್ಲಿ ಶೀಘ್ರಗತಿಯಲ್ಲಿ ಬೆಳವಣಿಗೆಯಾಗಿ ಈಗ ಭಾರತ ದೇಶದ 5ನೇ ಬೃಹತ್ ಮಹಾ ನಗರವಾಗಿದೆ. ಕಳೆದ ದಶಕದಲ್ಲಿ ಈ ನಗರವು ಹಿಂದೆಂದೂ ಕಂಡರಿಯದಂತಹ ಜನಸಂಖ್ಯೆ ಮತ್ತು ವಾಹನ ಸಂಖ್ಯೆಯಲ್ಲಿ ಹೆಚ್ಚಳವನ್ನು ಕಂಡಿದೆ. ನಗರದ ಹೃದಯ ಭಾಗದಲ್ಲಿನ ರಸ್ತೆಗಳು ಪ್ರಾರಂಭದಲ್ಲಿ ನಿರ್ಮಾಣಗೊಂಡ ಸ್ಥಿತಿಯಲ್ಲಿಯೆ ಇದ್ದು ಇವುಗಳ ಅಗಲೀಕರಣದಲ್ಲಿ ಯಾವುದೇ ಬದಲಾವಣೆಯಾಗದೆ ಇರುತ್ತವೆ. ಇವುಗಳು

ನಿರ್ಮಾಣಗೊಂಡ ಸಮಯದಲ್ಲಿದ್ದ ನಗರ ಸಂಚಾರವು ವರ್ಷದಿಂದ ವರ್ಷಕ್ಕೆ ದುಪ್ಪಟ್ಟುಗೊಂಡು ಪ್ರಸ್ತುತದ ಸಂಚಾರ ಸಾಂದ್ರತೆಯನ್ನು ತೆಗೆದುಕೊಳ್ಳಲು ಈ ರಸ್ತೆಗಳು ಸಮರ್ಥವಾಗಿರದೆ ಆಗಾಗ್ಗೆ ಸಂಚಾರ ಸ್ಥಗಿತಗೊಳ್ಳಲು ಮತ್ತು ಅಪಘಾತಗಳಿಗೂ ಕಾರಣವಾಗುತ್ತಿದೆ. ವರ್ಷಗಳು ಸರಿದಂತೆ ನಗರದಲ್ಲಿ ಸಂಚಾರ ನಿಯಂತ್ರಣ ಮತ್ತು ನಿರ್ವಹಣೆಗೆ ಸಂಚಾರ ಪೊಲೀಸ್ ಠಾಣೆಗಳನ್ನು ಸೃಜನೆಗೊಳಿಸಿ ಸಂಚಾರ ಪೊಲೀಸ್ ಸಿಬ್ಬಂದಿಯನ್ನು ಬಲವರ್ಧನೆಗೊಳಿಸಿದ್ದರೂ ಸಹ ಕೆಲವು ಭಾಗಗಳಲ್ಲಿನ ಸಂಚಾರ ಸ್ಥಗಿತ ಮತ್ತು ಅಸ್ತವ್ಯಸ್ಥತೆಯನ್ನು ತಹಬಂದಿಗೆ ತರಲು ಕಷ್ಟಸಾಧ್ಯವಾಗಿರುತ್ತೆ.

ಬೆಂಗಳೂರು ನಗರ ವ್ಯಾಪ್ತಿಯಲ್ಲಿನ ಸಂಚಾರದ ಸ್ಥಿತಿಗತಿ ಬಗ್ಗೆ ಅಧ್ಯಯನ ನಡೆಸಲಾಗಿ ಕೆಲವೊಂದು ರಸ್ತೆಗಳಲ್ಲಿ ಅಡ್ಡಾದಿಡ್ಡಿಯಾಗಿ ವಾಹನಗಳನ್ನು ನಿಲ್ಲಿಸುತ್ತಿರುವುದರಿಂದ ಸಂಚಾರದಲ್ಲಿ ತೀವ್ರತರನಾದ ಸ್ಥಗಿತ, ಹೆಚ್ಚಿನ ರಸ್ತೆ ಅಪಘಾತಗಳು ಸಂಭವಿಸಲು ಪ್ರಮುಖ ಕಾರಣವೆಂದು ಕಂಡುಬಂದಿದ್ದರ ಹಿನ್ನೆಲೆಯಲ್ಲಿ ಸಾರ್ವಜನಿಕ ಸುಗಮ ಸಂಚಾರ ಮತ್ತು ಸುರಕ್ಷತೆಯ ಹಿತದೃಷ್ಟಿಯಿಂದ ವಾಹನಗಳ ನಿಲುಗಡೆಗೆ ವ್ಯವಸ್ಥೆ ಹಾಗೂ ನಿಷೇಧಕ್ಕೆ ಸಂಬಂಧಿಸಿದಂತೆ ಮಾರ್ಪಾಡುಗಳನ್ನು ಮಾಡುವುದು ಅತ್ಯವಶ್ಯಕವಾಗಿ ಕಂಡುಬಂದಿರುತ್ತದೆ.

ಆದ್ದರಿಂದ ಕಲಂ 115 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 3 ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರ ಪ್ರಕಾರ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಬಿ.ಜಿ. ಜ್ಯೋತಿಪ್ರಕಾಶ್ ಮಿರ್ಜಿ, ಐಪಿಎಸ್, ಪೊಲೀಸ್ ಕಮೀಷನರ್, ಬೆಂಗಳೂರು ನಗರ ಆದ ನಾನು ಹಲಸೂರು ಸಂಚಾರ ಪೊಲೀಸ್ ಠಾಣಾ ವ್ಯಾಪ್ತಿಯಲ್ಲಿ ಈ ಕೆಳಕಂಡ ರಸ್ತೆಗಳಲ್ಲಿ ವಾಹನ ನಿಲುಗಡೆ ಮತ್ತು ನಿಷೇಧ ಸಂಬಂಧ ಮಾರ್ಪಾಡುಗಳನ್ನು ಮಾಡಿ ಜಾರಿಗೆ ತರಲು ಆದೇಶಿಸಿರುತ್ತೇನೆ.

| ರಸ್ತೆ ಹೆಸರು | ಇಂದ | ವರೆಗೆ |
|---|---|---|
| **ಬಿ.ಎಂ.ಟಿ.ಸಿ ಕಾಂಪ್ಲೆಕ್ಸ್ ನಿಂದ ದೊಮ್ಮಲೂರು ವರೆಗೆ** | | |
| 2ನೇ ಕ್ರಾಸ್ ರಸ್ತೆ | ಶಂಕರನಾಗ್ ಕ್ರಾಸ್‌ನಿಂದ | ದೊಮ್ಮಲೂರು 2ನೇ ಹಂತ 1ನೇ ಮುಖ್ಯ ರಸ್ತೆ ವರೆಗೆ – ರಸ್ತೆಯ ಎರಡೂ ಬದಿಯಲ್ಲಿ ವಾಹನಗಳ ನಿಲುಗಡೆಯನ್ನು ನಿಷೇಧಿಸಿದೆ. |
| ವಾಟರ್‌ಟ್ಯಾಂಕ್ ಕ್ರಾಸ್ | ಹಳೇ ಏರ್‌ಪೋರ್ಟ್ ರಸ್ತೆಯಿಂದ | ಬಿ.ಎಂ.ಟಿ.ಸಿ ಕಾಂಪ್ಲೆಕ್ಸ್ ವರೆಗೆ – ರಸ್ತೆಯ ಎರಡೂ ಬದಿಯಲ್ಲಿ ವಾಹನಗಳ ನಿಲುಗಡೆಯನ್ನು ನಿಷೇಧಿಸಿದೆ. |
| ಶನಿಮಹಾತ್ಮ ದೇವಸ್ಥಾನ ರಸ್ತೆ | ಶನಿಮಹಾತ್ಮ ದೇವಸ್ಥಾನ ದಿಂದ | 3ನೇ ಕ್ರಾಸ್ ಜಂಕ್ಷನ್ ವರೆಗೆ – ರಸ್ತೆಯ ಎರಡೂ ಬದಿಯಲ್ಲಿ ವಾಹನಗಳ ನಿಲುಗಡೆಯನ್ನು ನಿಷೇಧಿಸಿದೆ. |
| ಬಿ.ಡಿ.ಎ ಕಾಂಪ್ಲೆಕ್ಸ್ ರಸ್ತೆ | ಬಿ.ಎಂ.ಟಿ.ಸಿ ಕಾಂಪ್ಲೆಕ್ಸ್ ನಿಂದ | ಡೈಲಿ ಫ್ರೆಷ್ ಜಂಕ್ಷನ್ ವರೆಗೆ – ರಸ್ತೆಯ ಎರಡೂ ಬದಿಯಲ್ಲಿ ವಾಹನಗಳ ನಿಲುಗಡೆಯನ್ನು ನಿಷೇಧಿಸಿದೆ. |
| **ಶಾಂತಿಸಾಗರ್ ಹೋಟೆಲ್ ಕಡೆ–ದೊಮ್ಮಲೂರು** | | |
| ಸರ್ವೀಸ್ ರಸ್ತೆ | ಒಳವರ್ತುಲ ರಸ್ತೆಯ ಪ್ರವೇಶದಿಂದ | ಸ್ಕೂಲ್ ಜಂಕ್ಷನ್ ವರೆಗೆ – ರಸ್ತೆಯ ಎರಡೂ ಬದಿಯಲ್ಲಿ ವಾಹನಗಳ ನಿಲುಗಡೆಯನ್ನು ನಿಷೇಧಿಸಿದೆ. |
| 1ನೇ ಮುಖ್ಯ ರಸ್ತೆ | 14 ಕ್ರಾಸ್ ರಸ್ತೆಯಿಂದ | 7 ನೇ ಕ್ರಾಸ್ ರಸ್ತೆ ವರೆಗೆ – ರಸ್ತೆಯ ಎರಡೂ ಬದಿಯಲ್ಲಿ ವಾಹನಗಳ ನಿಲುಗಡೆಯನ್ನು ನಿಷೇಧಿಸಿದೆ. |
| 14ನೇ ಕ್ರಾಸ್ ರಸ್ತೆ | ಸಿ.ಪಿ.ಡಬ್ಲ್ಯೂ.ಡಿ ಕ್ವಾಟ್ರಸ್ ನಿಂದ | 2ನೇ ಮುಖ್ಯ ರಸ್ತೆ ವರೆಗೆ – ರಸ್ತೆಯ ಪಶ್ಚಿಮ ದಿಕ್ಕಿಗೆ ವಾಹನಗಳ ನಿಲುಗಡೆಯನ್ನು ನಿಷೇಧಿಸಿದೆ. |
| 2ನೇ ಮುಖ್ಯ ರಸ್ತೆ | ಒಳವರ್ತುಲ ರಸ್ತೆಯಿಂದ | 7ನೇ ಕ್ರಾಸ್ ರಸ್ತೆವರೆಗೆ – ರಸ್ತೆಯ ಉತ್ತರ ದಿಕ್ಕಿಗೆ ವಾಹನಗಳ ನಿಲುಗಡೆಯನ್ನು ನಿಷೇಧಿಸಿದೆ. |
| 1ನೇ ಮುಖ್ಯ ರಸ್ತೆ | 7ನೇ ಕ್ರಾಸ್‌ನಿಂದ | ದೊಮ್ಮಲೂರು ಅರಳೀಕಟ್ಟೆ ಕ್ರಾಸ್ ವರೆಗೆ – ರಸ್ತೆಯ ಉತ್ತರ ದಿಕ್ಕಿಗೆ ವಾಹನಗಳ ನಿಲುಗಡೆಯನ್ನು ನಿಷೇಧಿಸಿದೆ. |
| 7ನೇ ಕ್ರಾಸ್ ರಸ್ತೆ | ಸಿಗ್ನಲ್ ಲೈಟ್‌ನಿಂದ | ಕೆನರಾ ಬ್ಯಾಂಕ್ ವರೆಗೆ – ರಸ್ತೆಯ ಪಶ್ಚಿಮ ದಿಕ್ಕಿಗೆ ವಾಹನಗಳ ನಿಲುಗಡೆಯನ್ನು ನಿಷೇಧಿಸಿದೆ. |
| 12ನೇ ಕ್ರಾಸ್ ರಸ್ತೆ | ಸರ್ವೀಸ್ ರಸ್ತೆಯಿಂದ | 1ನೇ ದೊಮ್ಮಲೂರು ಮುಖ್ಯ ರಸ್ತೆವರೆಗೆ – ರಸ್ತೆಯ ಎರಡೂ ಬದಿಯಲ್ಲಿ ವಾಹನಗಳ ನಿಲುಗಡೆಯನ್ನು ನಿಷೇಧಿಸಿದೆ. |
| 13ನೇ ಕ್ರಾಸ್ ರಸ್ತೆ | 1ನೇ ಮುಖ್ಯ ರಸ್ತೆಯಿಂದ | ಸರ್ಕಾರಿ ಪಿ.ಯು.ಸಿ ಕಾಲೇಜ್‌ವರೆಗೆ – ರಸ್ತೆಯ ಎರಡೂ ಬದಿಯಲ್ಲಿ ವಾಹನಗಳ ನಿಲುಗಡೆಯನ್ನು ನಿಷೇಧಿಸಿದೆ. |
| 1ನೆ ಮೈನ್ 6ನೇ ಕ್ರಾಸ್ | 1ನೇ ಮೇನ್ 6ನೇ ಕ್ರಾಸ್ ನಿಂದ | 6ನೇ ಕ್ರಾಸ್ ರಸ್ತೆ ಪೂರ್ತಿ – ರಸ್ತೆಯ ಪಶ್ಚಿಮ ದಿಕ್ಕಿಗೆ ವಾಹನಗಳ ನಿಲುಗಡೆಯನ್ನು ನಿಷೇಧಿಸಿದೆ. |

ಅಂತೆಯೇ ಕಲಂ 116 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 4 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಉಪಯೋಗಿಸಿಕೊಂಡು ಮೇಲ್ಕಂಡ ನಿರ್ಬಂಧನೆಯನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸ್ಥಳೀಯ ಅಧಿಕಾರಿಗಳಿಗೆ ಆದೇಶಿಸಿರುತ್ತೇನೆ.

ಈ ಮೇಲ್ಕಂಡ ವ್ಯವಸ್ಥೆಯನ್ನು ದಿನಾಂಕ: 18–04–2012ರಿಂದ ಜಾರಿಗೆ ಬರುವಂತೆ ಆದೇಶಿಸಿರುತ್ತೇನೆ.

ಈ ಆದೇಶವನ್ನು ನಾನು ಈ ದಿವಸ ಅಂದರೆ ದಿನಾಂಕ: 17–04–2012ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ನೀಡಿರುತ್ತೇನೆ.

**ಬಿ.ಜಿ. ಜ್ಯೋತಿಪ್ರಕಾಶ್ ಮಿರ್ಜಿ,**
ಪೊಲೀಸ್ ಕಮೀಷನರ್,
ಬೆಂಗಳೂರು ನಗರ.

**ಪಿ.ಆರ್. 540**

## ಪೊಲೀಸ್ ಇಲಾಖೆ

**ಪೊಲೀಸ್ ಕಮೀಷನರ್‌ರವರ ಕಛೇರಿ, ನಂ.1, ಇನ್‌ಫೆಂಟ್ರಿ ರಸ್ತೆ, ಬೆಂಗಳೂರು ನಗರ,**

**ಸಂಖ್ಯೆ. 11/ಅಸೂ/ಅಸಿಪಿ/ಸಂವಿ/2012, ದಿನಾಂಕ: 17ನೇ ಏಪ್ರಿಲ್ 2012.**

### ಅಧಿಸೂಚನೆ

ಬೆಂಗಳೂರು ನಗರವು ಎಲ್ಲಾ ರಂಗಗಳಲ್ಲೂ ಅತಿವೇಗದಿಂದ ಬೆಳೆಯುತ್ತಿದೆ. ಕಳೆದ ದಶಕದಲ್ಲಿ ಈ ನಗರವು ಹಿಂದೆಂದೂ ಕಂಡರಿಯದಂತಹ ಜನಸಂಖ್ಯೆ ಮತ್ತು ವಾಹನ ಸಂಖ್ಯೆಯಲ್ಲಿ ಹೆಚ್ಚಳವನ್ನು ಕಂಡಿದೆ. ನಗರದ ಹೃದಯ ಭಾಗದಲ್ಲಿನ ರಸ್ತೆಗಳು ಪ್ರಾರಂಭದಲ್ಲಿ ನಿರ್ಮಾಣಗೊಂಡ ಸ್ಥಿತಿಯಲ್ಲಿಯೆ ಇದ್ದು ಇವುಗಳ ಅಗಲೀಕರಣದಲ್ಲಿ ಯಾವುದೇ ಬದಲಾವಣೆಯಾಗದೆ ಇರುತ್ತವೆ. ಇವುಗಳು ನಿರ್ಮಾಣಗೊಂಡ ಸಮಯದಲ್ಲಿದ್ದ ನಗರ ಸಂಚಾರವು ವರ್ಷದಿಂದ ವರ್ಷಕ್ಕೆ ದುಪ್ಪಟ್ಟುಗೊಂಡು ಪ್ರಸ್ತುತದ ಸಂಚಾರ ಸಾಂದ್ರತೆಯನ್ನು ತೆಗೆದುಕೊಳ್ಳಲು ಈ ರಸ್ತೆಗಳು ಸಮರ್ಥವಾಗಿರದೆ ಆಗಾಗ್ಗೆ ಸಂಚಾರ ಸ್ಥಗಿತಗೊಳ್ಳಲು ಮತ್ತು ಅಪಘಾತಗಳಿಗೂ ಕಾರಣವಾಗುತ್ತಿದೆ. ವರ್ಷಗಳು ಸರಿದಂತೆ ನಗರದಲ್ಲಿ ಸಂಚಾರ ನಿಯಂತ್ರಣ ಮತ್ತು ನಿರ್ವಹಣೆಗೆ ಸಂಚಾರ ಪೊಲೀಸ್ ಠಾಣೆಗಳನ್ನು ಸೃಜನೆಗೊಳಿಸಿ ಸಂಚಾರ ಪೊಲೀಸ್ ಸಿಬ್ಬಂದಿಯನ್ನು ಬಲವರ್ಧನೆಗೊಳಿಸಿದ್ದರೂ ಸಹ ಕೆಲವು ಭಾಗಗಳಲ್ಲಿನ ಸಂಚಾರ ಸ್ಥಗಿತ ಮತ್ತು ಅಸ್ತವ್ಯಸ್ಥತೆಯನ್ನು ತಹಬಂದಿಗೆ ತರಲು ಕಷ್ಟಸಾಧ್ಯವಾಗಿರುತ್ತೆ.

ಬೆಂಗಳೂರು ನಗರ ವ್ಯಾಪ್ತಿಯಲ್ಲಿನ ಸಂಚಾರದ ಸ್ಥಿತಿಗತಿ ಬಗ್ಗೆ ಅಧ್ಯಯನ ನಡೆಸಲಾಗಿ ಕೆಲವೊಂದು ರಸ್ತೆಗಳಲ್ಲಿ ಅಡ್ಡಾದಿಡ್ಡಿಯಾಗಿ ವಾಹನಗಳನ್ನು ನಿಲ್ಲಿಸುತ್ತಿರುವುದರಿಂದ ಸಂಚಾರದಲ್ಲಿ ತೀವ್ರತರನಾದ ಸ್ಥಗಿತ, ಹೆಚ್ಚಿನ ರಸ್ತೆ ಅಪಘಾತಗಳು ಸಂಭವಿಸಲು ಪ್ರಮುಖ ಕಾರಣವೆಂದು ಕಂಡುಬಂದಿದ್ದರ ಹಿನ್ನೆಲೆಯಲ್ಲಿ ಸಾರ್ವಜನಿಕ ಸುಗಮ ಸಂಚಾರ ಮತ್ತು ಸುರಕ್ಷತೆಯ ಹಿತದೃಷ್ಠಿಯಿಂದ ವಾಹನಗಳ ನಿಲುಗಡೆಗೆ ವ್ಯವಸ್ಥೆ ಹಾಗೂ ನಿಷೇಧಕ್ಕೆ ಸಂಬಂಧಿಸಿದಂತೆ ಮಾರ್ಪಾಡುಗಳನ್ನು ಮಾಡುವುದು ಅತ್ಯವಶ್ಯಕವಾಗಿ ಕಂಡುಬಂದಿರುತ್ತದೆ.

ಆದ್ದರಿಂದ ಕಲಂ 115 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 3 ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರ ಪ್ರಕಾರ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಬಿ.ಜಿ. ಜ್ಯೋತಿಪ್ರಕಾಶ್ ಮಿರ್ಜಿ, ಐಪಿಎಸ್, ಪೊಲೀಸ್ ಕಮೀಷನರ್, ಬೆಂಗಳೂರು ನಗರ ಆದ ನಾನು ಇಂದಿರಾನಗರ ಸಂಚಾರ ಪೊಲೀಸ್ ಠಾಣಾ ವ್ಯಾಪ್ತಿಯಲ್ಲಿ ಈ ಕೆಳಕಂಡ ರಸ್ತೆಗಳಲ್ಲಿ ವಾಹನ ನಿಲುಗಡೆ ಮತ್ತು ನಿಷೇಧ ಸಂಬಂಧ ಮಾರ್ಪಾಡುಗಳನ್ನು ಮಾಡಿ ಜಾರಿಗೆ ತರಲು ಆದೇಶಿಸಿರುತ್ತೇನೆ.

1. ದೊಮ್ಮಲೂರು 2ನೇ ಹಂತದ ಸರ್ವೀಸ್ ರಸ್ತೆಯಲ್ಲಿ 17ನೇ ಮುಖ್ಯ ರಸ್ತೆಯಿಂದ 12ನೇ ಮುಖ್ಯ ರಸ್ತೆ ಜಂಕ್ಷನ್‌ವರೆಗೆ ರಸ್ತೆಯ ಉತ್ತರ ಭಾಗದಲ್ಲಿ ಪಾರ್ಕ್ ಕಡೆಗೆ ವಾಹನಗಳ ನಿಲುಗಡೆಯನ್ನು ನಿಷೇಧಿಸಿದೆ.
2. ಇಂದಿರಾನಗರ ಜೋಡಿ ರಸ್ತೆಯಲ್ಲಿ ಅದಲು ಬದಲು ದಿನಗಳಲ್ಲಿ ಅಂದರೆ ಬೆಸ ಸಂಖ್ಯೆಯ ದಿನಾಂಕಗಳಂದು ರಸ್ತೆಯ ಪೂರ್ವಕ್ಕೆ ಹಾಗೂ ಸರಿ ಸಂಖ್ಯೆಯ ದಿನಾಂಕಗಳಂದು ರಸ್ತೆಯ ಪಶ್ಚಿಮಕ್ಕೆ ವಾಹನಗಳ ನಿಲುಗಡೆ ಮಾಡಲು ಆದೇಶಿಸಿದೆ.
3. ನಾಗವಾರಪಾಳ್ಯ ಮುಖ್ಯ ರಸ್ತೆಯಲ್ಲಿ ಬೆನ್ನಿಗಾನಹಳ್ಳಿ ಜಂಕ್ಷನ್‌ನಿಂದ ಡಿ.ಆರ್.ಡಿ.ಓ ಹಿಂಬದಿಯ ಗೇಟ್ ವರೆಗೆ ರಸ್ತೆಯ ಎರಡೂ ಬದಿಯಲ್ಲಿ ವಾಹನಗಳ ನಿಲುಗಡೆಯನ್ನು ನಿಷೇಧಿಸಿದೆ.
4. ಕಗ್ಗದಾಸಪುರ ಮುಖ್ಯ ರಸ್ತೆಯಲ್ಲಿ ಎಂ.ಕೆ. ರಿಟೇಲ್ ಷಾಪ್‌ನಿಂದ ಕಗ್ಗದಾಸಪುರ ರೈಲ್ವೆ ಗೇಟ್ ಜಂಕ್ಷನ್‌ವರೆಗೆ ರಸ್ತೆಯ ಎರಡೂ ಬದಿಯಲ್ಲಿ ವಾಹನಗಳ ನಿಲುಗಡೆಯನ್ನು ನಿಷೇಧಿಸಿದೆ.
5. ಹೆಚ್.ಎ.ಎಲ್ 2ನೇ ಹಂತದ 4ನೇ ಅಡ್ಡ ರಸ್ತೆಯಲ್ಲಿ 12ನೇ ಮುಖ್ಯ ರಸ್ತೆ ಜಂಕ್ಷನ್‌ನಿಂದ 8ನೇ ಮುಖ್ಯ ರಸ್ತೆ ಜಂಕ್ಷನ್‌ವರೆಗೆ ರಸ್ತೆಯ ಪೂರ್ವ ಭಾಗದಲ್ಲಿ ವಾಹನಗಳ ನಿಲುಗಡೆಗೆ ಅವಕಾಶ ಕಲ್ಪಿಸಿ ಪಶ್ಚಿಮದ ಕಡೆಗೆ ವಾಹನಗಳ ನಿಲುಗಡೆಯನ್ನು ನಿಷೇಧಿಸಿದೆ.

ಅಂತೆಯೇ ಕಲಂ 116 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 4 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಉಪಯೋಗಿಸಿಕೊಂಡು ಮೇಲ್ಕಂಡ ನಿರ್ಬಂಧನೆಯನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸ್ಥಳೀಯ ಅಧಿಕಾರಿಗಳಿಗೆ ಆದೇಶಿಸಿರುತ್ತೇನೆ.

ಈ ಮೇಲ್ಕಂಡ ವ್ಯವಸ್ಥೆಯನ್ನು ದಿನಾಂಕ: 18–04–2012 ರಿಂದ ಜಾರಿಗೆ ಬರುವಂತೆ ಆದೇಶಿಸಿರುತ್ತೇನೆ.

ಈ ಆದೇಶವನ್ನು ನಾನು ಈ ದಿವಸ ಅಂದರೆ ದಿನಾಂಕ: 17–04–2012 ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ನೀಡಿರುತ್ತೇನೆ.

**ಬಿ.ಜಿ. ಜ್ಯೋತಿಪ್ರಕಾಶ್ ಮಿರ್ಜಿ,**
ಪೊಲೀಸ್ ಕಮೀಷನರ್,
ಬೆಂಗಳೂರು ನಗರ.

**ಪಿ.ಆರ್. 541**

## ಪೊಲೀಸ್ ಇಲಾಖೆ

**ಪೊಲೀಸ್ ಕಮೀಷನರ್‌ರವರ ಕಛೇರಿ, ನಂ.1, ಇನ್‌ಫೆಂಟ್ರಿ ರಸ್ತೆ, ಬೆಂಗಳೂರು ನಗರ,**

**ಸಂಖ್ಯೆ. 12/ಅಸೂ/ಅಸಿಪಿ/ಸಂವಿ/2012, ದಿನಾಂಕ: 26ನೇ ಏಪ್ರಿಲ್ 2012.**

### ಅಧಿಸೂಚನೆ

ಬೆಂಗಳೂರು ನಗರ – ಸದಾಶಿವನಗರ ಸಂಚಾರ ಪೊಲೀಸ್ ಠಾಣಾ ವ್ಯಾಪ್ತಿಯಲ್ಲಿನ ವೈಯಾಲಿಕಾವಲ್ 14ನೇ ಅಡ್ಡ ರಸ್ತೆಯು ಕಿರಿದಾದ ರಸ್ತೆಯಾಗಿರುತ್ತದೆ. ಈ ರಸ್ತೆಯಲ್ಲಿ ಲಿಟಲ್ ಮಿಲೇನಿಯಮ್ ಎಂಬ ಒಂದು ಪ್ಲೇ ಹೋಂ ಇರುತ್ತದೆ. 9ನೇ ಮುಖ್ಯ ರಸ್ತೆ ಮತ್ತು 14ನೇ ಅಡ್ಡ ರಸ್ತೆ ಸಂಗಮದಲ್ಲಿ ಶ್ರೀರಾಮ ದೇವರ ದೇವಸ್ಥಾನ ವಿರುತ್ತದೆ. ವೈಯಾಲಿಕಾವಲ್ 2ನೇ ಮುಖ್ಯ ರಸ್ತೆ ಮತ್ತು 14ನೇ ಅಡ್ಡ ರಸ್ತೆಯ ಸಂಗಮದಲ್ಲಿ ರಾಜೇಶ್ ಹೋಟೆಲ್ ಇರುತ್ತದೆ. ಪ್ಲೇಹೋಂ, ದೇವಸ್ಥಾನ ಮತ್ತು ರಾಜೇಶ್ ಹೋಟೆಲ್‌ಗೆ ಬರುವ ಜನರು ತಮ್ಮ ವಾಹನಗಳನ್ನು 14ನೇ ಅಡ್ಡ ರಸ್ತೆಯಲ್ಲಿ ರಸ್ತೆಯ ಎರಡೂ ಕಡೆ ನಿಲ್ಲಿಸುತ್ತಿರುವುದರಿಂದ ಸದರಿ ರಸ್ತೆಯ ನಿವಾಸಿಗಳಿಗೆ ಹಾಗೂ ರಸ್ತೆಯಲ್ಲಿ ಸಂಚರಿಸುವ ಇತರೆ ಸಾರ್ವಜನಿಕರ ಸುಗಮ ಸಂಚಾರಕ್ಕೆ ಹೆಚ್ಚಿನ ಅಡಚಣೆಯಾಗುತ್ತಿರುವುದು ಕಂಡುಬಂದಿದ್ದರ ಹಿನ್ನೆಲೆಯಲ್ಲಿ ಸಾರ್ವಜನಿಕ ಸುಗಮ ಸಂಚಾರ ಮತ್ತು ಸುರಕ್ಷತೆಯ ಹಿತದೃಷ್ಟಿಯಿಂದ 14ನೇ ಅಡ್ಡರಸ್ತೆಯಲ್ಲಿ ರಸ್ತೆಯ ಒಂದು ಬದಿಗೆ ವಾಹನಗಳ ನಿಲುಗಡೆಗೆ ಅವಕಾಶ ಕಲ್ಪಿಸಿ ಮತ್ತೊಂದು ಬದಿಗೆ ನಿಲುಗಡೆಯನ್ನು ನಿಷೇಧಿಸುವುದು ಅತ್ಯವಶ್ಯಕವಾಗಿ ಕಂಡುಬಂದಿರುತ್ತದೆ.

ಆದ್ದರಿಂದ ಕಲಂ 115 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 3 ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರ ಪ್ರಕಾರ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಬಿ.ಜಿ. ಜ್ಯೋತಿಪ್ರಕಾಶ್ ಮಿರ್ಜಿ, ಐಪಿಎಸ್, ಪೊಲೀಸ್ ಕಮೀಷನರ್, ಬೆಂಗಳೂರು ನಗರ ಆದ ನಾನು ವೈಯಾಲಿಕಾವಲ್ 14ನೇ ಅಡ್ಡ ರಸ್ತೆಯಲ್ಲಿ ಕೆಳಕಂಡಂತೆ ವಾಹನ ನಿಲುಗಡೆ ಮತ್ತು ನಿಷೇಧ ಸಂಬಂಧ ಮಾರ್ಪಾಡನ್ನು ಮಾಡಿ ಜಾರಿಗೆ ತರಲು ಆದೇಶಿಸಿರುತ್ತೇನೆ.

**"ವೈಯಾಲಿಕಾವಲ್ 14ನೇ ಅಡ್ಡ ರಸ್ತೆಯಲ್ಲಿ 2ನೇ ಮುಖ್ಯ ರಸ್ತೆಯಿಂದ 9ನೇ ಮುಖ್ಯ ರಸ್ತೆಯವರೆಗೆ ರಸ್ತೆಯ ದಕ್ಷಿಣ ಭಾಗದಲ್ಲಿ ವಾಹನಗಳ ನಿಲುಗಡೆಗೆ ಅವಕಾಶ ಕಲ್ಪಿಸಿ ಉತ್ತರದ ಕಡೆಗೆ ವಾಹನಗಳ ನಿಲುಗಡೆಯನ್ನು ನಿಷೇಧಿಸಿದೆ"**

ಅಂತೆಯೇ ಕಲಂ 116 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 4 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಉಪಯೋಗಿಸಿಕೊಂಡು ಮೇಲ್ಕಂಡ ನಿರ್ಬಂಧನೆಯನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸ್ಥಳೀಯ ಅಧಿಕಾರಿಗಳಿಗೆ ಆದೇಶಿಸಿರುತ್ತೇನೆ.

ಈ ಮೇಲ್ಕಂಡ ವ್ಯವಸ್ಥೆಯನ್ನು ದಿನಾಂಕ: 27–04–2012 ರಿಂದ ಜಾರಿಗೆ ಬರುವಂತೆ ಆದೇಶಿಸಿರುತ್ತೇನೆ.

ಈ ಆದೇಶವನ್ನು ನಾನು ಈ ದಿವಸ ಅಂದರೆ ದಿನಾಂಕ: 26–04–2012 ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ನೀಡಿರುತ್ತೇನೆ.

**ಬಿ.ಜಿ. ಜ್ಯೋತಿಪ್ರಕಾಶ್ ಮಿರ್ಜಿ,**
ಪೊಲೀಸ್ ಕಮೀಷನರ್,
ಬೆಂಗಳೂರು ನಗರ.

**ಪಿ.ಆರ್. 599**

## ರಾಜ್ಯ ಅಬಕಾರಿ ಇಲಾಖೆ

**ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಸ್ ರವರ ಕಛೇರಿ, ರಾಮನಗರ ಜಿಲ್ಲೆ, ರಾಮನಗರ.**

**ಸಾರ್ವಜನಿಕ ಪ್ರಾಧಿಕಾರ ಹೊಣೆಗಾರಿಕೆ**

**(ಮಾಹಿತಿ ಹಕ್ಕು ಅಧಿನಿಯಮ 4(1)ಎ ಮತ್ತು 4(1)ಬಿ ಅನ್ವಯ**

**4(1)ಎ. ಸಾರ್ವಜನಿಕ ಪ್ರಾಧಿಕಾರಗಳ ಹೊಣೆಗಾರಿಕೆ** – ಪ್ರತಿಯೊಂದು ಸಾರ್ವಜನಿಕ ಪ್ರಾಧಿಕಾರವು ಈ ಅಧಿನಿಯಮದಡಿ ಮಾಹಿತಿ ಹಕ್ಕಿಗಾಗಿ ಅನುಕೂಲ ಮಾಡಿಕೊಡುವ ರೀತಿಯಲ್ಲಿ ಮತ್ತು ನಮೂನೆಯಲ್ಲಿ ಕ್ರಮಬದ್ಧ ಸೂಚಿಪಟ್ಟಿ ಮತ್ತು ಸೂಚೀಕರಣಗೊಂಡ ಅದರ ಎಲ್ಲಾ ದಾಖಲೆಗಳನ್ನು ನಿರ್ವಹಿಸತಕ್ಕದ್ದು ಮತ್ತು ಸೂಕ್ತ ಸಮಯದೊಳಗಾಗಿ ಮತ್ತು ಸಂಪನ್ಮೂಲಗಳ ಲಭ್ಯತೆಗೊಳಪಟ್ಟು ಗಣಕೀಕರಣಕ್ಕೆ ಸೂಕ್ತವಾದ ಎಲ್ಲಾ ದಾಖಲೆಗಳನ್ನು

ಗಣಕೀಕರಿಸುವಂತೆ ಮತ್ತು ಅಂತಹ ದಾಖಲೆಗಳು ಸುಲಭವಾಗಿ ದೊರೆಯುವಂತೆ ರಾಜ್ಯಾದ್ಯಂತ ವಿವಿಧ ಸಿಸ್ಟಂಗಳಲ್ಲಿ ಸಂಪರ್ಕಜಾಲದ ಮೂಲಕ ಸಂಪರ್ಕ ಕಲ್ಪಿಸುವಂತೆ ಮಾಡತಕ್ಕದ್ದು.

ಕಛೇರಿಗೆ ಸಂಬಂಧಿಸಿದ ದಾಖಲೆ ವಹಿ ಕಡತಗಳನ್ನು ವಿಭಾಗಿಸಿ, ಗಣಕೀಕರಿಸಿ ಇಡಲಾಗಿದೆ.

(1) ಐಎಂಎಲ್ ಶಾಖೆಗೆ ಸಂಬಂಧಿಸಿದ ಕಡತಗಳು (187 ಕಡತಗಳು)

(2) ಡಿಸ್ಟಿಲರಿ ಶಾಖೆಗೆ ಸಂಬಂಧಿಸಿದ ಕಡತಗಳು (30 ಕಡತಗಳು)

(3) ಆರ್.ಟಿ.ಐ/ದೂರು/ಇತರೆಗೆ ಸಂಬಂಧಿಸಿದ ಕಡತಗಳು (156 ಕಡತಗಳು)

(4) ಅಪರಾಧ ಶಾಖೆಗೆ ಸಂಬಂಧಿಸಿದ ಕಡತಗಳು (344 ಕಡತಗಳು)

(5) ಸಿಬ್ಬಂದಿಶಾಖೆಗೆ ಸಂಬಂಧಿಸಿದ ಕಡತಗಳು (85 ಕಡತಗಳು)

(6) ನಗದುಶಾಖೆ/ಬಿಲ್ಲುಶಾಖೆಗೆ ಸಂಬಂಧಿಸಿದ ಕಡತಗಳು (25 ಕಡತಗಳು)

**4(1)ಬಿ. I. ಸಾರ್ವಜನಿಕ ಪ್ರಾಧಿಕಾರದ ರಚನೆ, ಕಾರ್ಯಗಳು ಮತ್ತು ಕರ್ತವ್ಯಗಳ ವಿವರಗಳು.**

ಸಾರ್ವಜನಿಕ ಪ್ರಾಧಿಕಾರ – ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಸ್ ರವರ ಕಛೇರಿ, ರಾಮನಗರ ಜಿಲ್ಲೆ. ಈ ಕಛೇರಿಯು ರಾಜ್ಯ ಅಬಕಾರಿ ಇಲಾಖೆಯ ಜಿಲ್ಲಾ ಕಛೇರಿಯಾಗಿ ದಿನಾಂಕ:23.08.2007ರಿಂದ ಜಿಲ್ಲೆಯಲ್ಲಿ ಅಸ್ತಿತ್ವಕ್ಕೆ ಬಂದಿದ್ದು, ಜಿಲ್ಲಾ ಮಟ್ಟದ ಕೆಲಸ ಕಾರ್ಯಗಳನ್ನು ನಿರ್ವಹಿಸುತ್ತದೆ.

(1) ರಾಜಸ್ವ ಕ್ರೋಢೀಕರಣ

(2) ಜಾರಿ ಮತ್ತು ತನಿಖಾ ಕಾರ್ಯಗಳನ್ನು ಕೈಗೊಂಡು ಅಂದರೆ ಅಬಕಾರಿ ಧಾಳಿಗಳು, ರಸ್ತೆಗಸ್ತು, ರಸ್ತೆಕಾವಲು, ಸನ್ನದು ತಪಾಸಣೆಗಳನ್ನು ಕೈಗೊಂಡು ಅಬಕಾರಿ ಅಕ್ರಮಗಳನ್ನು ತಡೆಗಟ್ಟುವುದು ಹಾಗೂ ಆರೋಪಿಗಳನ್ನು ದಸ್ತಗಿರಿಗೊಳಿಸಿ ನ್ಯಾಯಾಲಯಕ್ಕೆ ಒಪ್ಪಿಸಿ ಕಾನೂನು ರೀತ್ಯಾ ಕ್ರಮ ಕೈಗೊಳ್ಳುವುದು.

(3) ಅಕ್ರಮ/ಅನಧಿಕೃತ/ನಕಲಿ ಮದ್ಯ/ಸೇಂದಿ/ಕಳ್ಳಭಟ್ಟಿ ಸಾಗಾಣಿಕೆ/ಮಾರಾಟ/ತಯಾರಿಕೆ ಇತ್ಯಾದಿಗಳನ್ನು ಪತ್ತೆಹಚ್ಚಿ ಮೊಕದ್ದಮೆಗಳನ್ನು ದಾಖಲಿಸುವುದು.

(4) ಅಕ್ರಮ ಗಾಂಜಾ ಹೊಂದುವುದು/ಬೆಳೆಸುವುದು/ಮಾರಾಟ ಮಾಡುವುದನ್ನು ಪತ್ತೆಹಚ್ಚಿ ಮೊಕದ್ದಮೆಗಳನ್ನು ದಾಖಲಿಸುವುದು.

(5) ರಾಮನಗರ, ಚನ್ನಪಟ್ಟಣ, ಕನಕಪುರ ಮತ್ತು ಮಾಗಡಿ ತಾಲ್ಲೂಕು ವಲಯ ಕಛೇರಿ ಹಾಗೂ ರಾಮನಗರ ಉಪ ವಿಭಾಗ ಕಛೇರಿಯ ಜಾರಿ ಮತ್ತು ತನಿಖಾ ಕಾರ್ಯ, ಬಿಲ್ಲುಗಳ ಮೇಲು ಸಹಿ ಇತ್ಯಾದಿಗಳ ಮೇಲುಸ್ತುವಾರಿ.

**II. ಅಧಿಕಾರಿಗಳು ಮತ್ತು ನೌಕರರ ಅಧಿಕಾರ ಮತ್ತು ಕರ್ತವ್ಯಗಳು:**

| ಕ್ರ ಸಂ | ಅಧಿಕಾರಿಗಳ ಹಾಗೂ ನೌಕರರ ಹೆಸರು ಶ್ರೀ/ಶ್ರೀಮತಿ | ಪದನಾಮ | ನಿಯೋಜಿತ ಅಧಿಕಾರಿಗಳ ವಿವರ |
|---|---|---|---|
| 1 | ಎಸ್.ಶ್ರೀನಿವಾಸಮೂರ್ತಿ | ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಸ್ | 1) ಕರ್ನಾಟಕ ಅಬ್ಕಾರಿ ಕಾಯ್ದೆ 1965 ರ ಕಲಂ 43 ಎ ರ ಅಡಿಯಲ್ಲಿ ಪ್ರಾಧಿಕೃತ ಅಧಿಕಾರಿಯಾಗಿ ಕಾರ್ಯನಿರ್ವಹಿಸುವುದು.<br>2) ಜಿಲ್ಲಾ ವ್ಯಾಪ್ತಿಯ ಅಬ್ಕಾರಿ ವಸ್ತುಗಳ ಬಳಕೆಯ ಪುನರಾವಲೋಕನ<br>3) ಕರ್ನಾಟಕ ಅಬ್ಕಾರಿ ಕಾಯ್ದೆಯ ಅಡಿಯಲ್ಲಿ ಸನ್ನದುಗಳ ವರ್ಗಾವಣೆ ಮತ್ತು ಸ್ಥಳಾಂತರಕ್ಕೆ ಸಂಬಂಧಪಟ್ಟ ಕಾರ್ಯಗಳ ಸೂಕ್ತ ನಿರ್ವಹಣೆ<br>4) ಹಳೇ ಬಾಕಿ ವಸೂಲಾತಿಗಾಗಿ ಕ್ರಮ ಕೈಗೊಳ್ಳುವುದು ಹಾಗೂ ಕೆ.ಎಲ್.ಆರ್. ಕಾಯ್ದೆಯಡಿಯಲ್ಲಿ ಬಾಕಿ ವಸೂಲಾತಿಗೆ ಪ್ರಾರಂಭಿಕ ಕ್ರಮ ಕೈಗೊಳ್ಳುವುದು<br>5) ಸರ್ಕಾರದ ರಾಜಸ್ವ ಸಂಗ್ರಹಣೆ<br>6) ಅಬ್ಕಾರಿ ಅಧೀಕ್ಷಕರು ಹಾಗೂ ಉಪ ಅಧೀಕ್ಷಕರುಗಳ ದಿನಚರಿಗಳ ಪುನರಾವಲೋಕನ<br>7) ಅಬ್ಕಾರಿ ಅಧೀಕ್ಷಕರು ಹಾಗೂ ಉಪ ಅಧೀಕ್ಷಕರುಗಳ ಸಾಂದರ್ಭಿಕರ ರಜೆ ಮಂಜೂರಾತಿ |

| ಕ್ರ ಸಂ | ಅಧಿಕಾರಿಗಳ ಹಾಗೂ ನೌಕರರ ಹೆಸರು ಶ್ರೀ/ಶ್ರೀಮತಿ | ಪದನಾಮ | ನಿಯೋಜಿತ ಅಧಿಕಾರಿಗಳ ವಿವರ |
|---|---|---|---|
| | | | 8) ಜಿಲ್ಲಾ ವ್ಯಾಪ್ತಿಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ರಾಸಾಯನಿಕ ಘಟಕಗಳು ಹಾಗೂ ಇನ್ನಿತರ ಸನ್ನದು ಘಟಕಗಳ ಮೇಲುಸ್ತುವಾರಿ ಹಾಗೂ ತನಿಖೆ<br>9) ಕಾರ್ಯವ್ಯಾಪ್ತಿಯಲ್ಲಿನ ಅಬಕಾರಿ ಪ್ರಕರಣಗಳ ಪುನರಾವಲೋಕನ<br>10) ಕಾರ್ಯ ವ್ಯಾಪ್ತಿಯಲ್ಲಿನ ಅಧೀನ ಕಛೇರಿಗಳ ವರ್ಷಕ್ಕೊಮ್ಮೆ ತಪಾಸಣೆ<br>11) ಕಾರ್ಯವ್ಯಾಪ್ತಿಯಲ್ಲಿನ ಡಿಸ್ಟಿಲರಿಗಳು, ಬ್ರೆವರಿಗಳು, ವೈನರಿಗಳು ಹಾಗೂ ರಾಸಾಯನಿಕ ಘಟಕಗಳ ತಪಾಸಣೆ<br>12) ಸನ್ನದು ಅಂಗಡಿಗಳ ತಪಾಸಣೆ<br>13) ಇಲಾಖೆಗೆ ಸಂಬಂಧಪಟ್ಟ ಅಪರಾಧ ಪ್ರಕರಣಗಳಿಗೆ ಜಿಲ್ಲೆಯ ಪೊಲೀಸ್ ಅಧೀಕ್ಷಕರೊಂದಿಗೆ ಸಂಪರ್ಕಹೊಂದಿ ಸಮನ್ವಯ ಅಧಿಕಾರಿಯಾಗಿ ಕಾರ್ಯನಿರ್ವಹಿಸುವುದು<br>14) ಹಳೇ ಬಾಕಿ ವಸೂಲಾಗಿ ಹಾಗೂ ಕರ ಸಮಾಧಾನ ಯೋಜನೆಗೆ ಸಂಬಂಧಪಟ್ಟಂತೆ ಕಂದಾಯ ಇಲಾಖೆಯ ಅಧಿಕಾರಿಗಳೊಂದಿಗೆ ನಿಕಟ ಸಂಪರ್ಕ ಹೊಂದಿ ಸಮನ್ವಯ ಅಧಿಕಾರಿಯಾಗಿ ಕಾರ್ಯ ನಿರ್ವಹಿಸುವುದು<br>15) ಮದ್ಯಸಾರ, ಎಥೆನಾಲ್ ಮತ್ತು ಡಿನೇಚರ್ಡ್ ಮದ್ಯಸಾರಗಳ ವಿತರಣೆಗನುಗುಣವಾಗಿ ರಹದಾರಿ ಪತ್ರ ನೀಡುವುದು<br>16) ಮಾಹೆಯಾನ 15 ದಿನ ಪ್ರವಾಸ ಕೈಗೊಳ್ಳುವುದು ಪ್ರಮುಖವಾಗಿ ಲಂಬಾಣೀ ತಾಂಡ ಹಾಗೂ ಕುಗ್ರಾಮಗಳಲ್ಲಿ ಕನಿಷ್ಠ 8 ರಾತ್ರಿ ತಂಗುವುದು<br>17) ಕಳ್ಳಭಟ್ಟಿ ಹಾಗೂ ನಕಲಿ ಮದ್ಯ ಸೇವನೆಯಿಂದಾಗುವ ದುಷ್ಪರಿಣಾಮಗಳೂ ಹಾಗೂ ಅನಾಹುತಗಳ ಬಗ್ಗೆ ಜಿಲ್ಲೆಯಲ್ಲಿ ಸಾರ್ವಜನಿಕರಲ್ಲಿ ಅರಿವು ಮೂಡಿಸುವ ಬಗ್ಗೆ ಗ್ರಾಮ ಸಭೆಯನ್ನು ನಡೆಸುವುದು. ಸರ್ಕಾರೇತರ ಸಂಸ್ಥೆಗಳು ಹಾಗೂ ಸ್ತ್ರೀ ಶಕ್ತಿ ಸ್ವ ಸಹಾಯ ಸಂಸ್ಥೆಗಳನ್ನು ಈ ಕಾರ್ಯಕ್ರಮದಲ್ಲಿ ತೊಡಗಿಸಿಕೊಳ್ಳುವುದು<br>18) ಮುಟ್ಟುಗೋಲು ಹಾಕಿಕೊಂಡ ಅಬ್ಕಾರಿ ವಸ್ತುಗಳ ವಿಲೇವಾರಿ ಮಾಡುವುದು<br>19) ಜಿಲ್ಲಾದ್ಯಂತ ಅಬ್ಕಾರಿ ಅಕ್ರಮಗಳ ಬಗ್ಗೆ ಗುಪ್ತ ಮಾಹಿತಿ ಸಂಗ್ರಹಿಸಿ ವಿಭಾಗದ ಅಬ್ಕಾರಿ ಜಂಟಿ ಆಯುಕ್ತರು (ಜಾರಿ ಮತ್ತು ತನಿಖೆ) ಇವರಿಗೆ ನೀಡತಕ್ಕದ್ದು. |
| 2 | ಅಬಕಾರಿ ಉಪ ಅಧೀಕ್ಷಕರು | ಹುದ್ದೆ ಖಾಲಿ ಇರುತ್ತದೆ. | – |
| 3 | ಡಿ.ದೇಮಣ್ಣ (ನಿಯೋಜನೆ) | ಕಛೇರಿ ಅಧೀಕ್ಷಕರು | 1. ಆಡಳಿತ ಮತ್ತು ಸಿಬ್ಬಂದಿ ಶಾಖೆಗೆ ಸಂಬಂಧಪಟ್ಟ ಕಡತಗಳು<br>2. ಕಾಲಮಿತಿ ಪದೋನ್ನತಿ, ವಿಶೇಷ ಬಡ್ತಿ ಹಾಗೂ ಮುಂಬಡ್ತಿಗೆ ಸಂಬಂಧಪಟ್ಟ ಕಡತಗಳು<br>3. ಅನುಕಂಪದ ಆಧಾರದ ಮೇಲೆ ನೌಕರಿ ನೀಡುವ ಕುರಿತು<br>4. ವರ್ಗಾವಣೆಗೆ ಸಂಬಂಧಪಟ್ಟ ಕಡತ ಮತ್ತು ಸೇವಾ ಪುಸ್ತಕಗಳ ನಿರ್ವಹಣೆ<br>5. ಅಧೀನ ಕಛೇರಿ ಸಿಬ್ಬಂದಿಗೆ ವಾರ್ಷಿಕ ವೇತನ ಬಡ್ತಿ, ರಜೆ ಮಂಜೂರಾತಿ ಕಡತಗಳು<br>6. ಸಿಬ್ಬಂದಿಗೆ ಶಿಸ್ತು ಕ್ರಮ ಕಡತಗಳ ನಿರ್ವಹಣೆ |

| ಕ್ರ ಸಂ | ಅಧಿಕಾರಿಗಳ ಹಾಗೂ ನೌಕರರ ಹೆಸರು ಶ್ರೀ/ಶ್ರೀಮತಿ | ಪದನಾಮ | ನಿಯೋಜಿತ ಅಧಿಕಾರಿಗಳ ವಿವರ |
|---|---|---|---|
| | | | 7. ವಾರ್ಷಿಕ ಆಯವ್ಯಯ ಪಟ್ಟಿ ತಯಾರಿಕೆ<br>8. ಸಮವಸ್ತ್ರಗಳಿಗೆ ಸಂಬಂಧಿಸಿದ ಕಡತಗಳ ನಿರ್ವಹಣೆ<br>9. ಸರ್ಕಾರಿ ಸ್ವತ್ತುಗಳ ನಿರ್ವಹಣೆ<br>10. ನ್ಯಾಯಾಲಯದಲ್ಲಿರುವ ರಿಟ್ ಅಪೀಲು ಹಾಗೂ ಮೂಲ ದಾವೆಗಳ ಕಡತಗಳ ನಿರ್ವಹಣೆ<br>11. ಮರು ಪಾವತಿ ಕಡತಗಳ ನಿರ್ವಹಣೆ |
| 4 | ಅಬಕಾರಿ ನಿರೀಕ್ಷಕರು | ಹುದ್ದೆ ಖಾಲಿ ಇರುತ್ತದೆ. | – |
| 5 | ಅಬಕಾರಿ ಉಪ ನಿರೀಕ್ಷಕರು | ಹುದ್ದೆ ಖಾಲಿ ಇರುತ್ತದೆ. | – |
| 6 | ಟಿ.ಎನ್.ಕೋಮಲ | ಶೀಘ್ರಲಿಪಿಗಾರರು | 1) ಅಬಕಾರಿ ಉಪ ಆಯುಕ್ತರಿಂದ ಉಕ್ತಲೇಖನಗಳನ್ನು ತೆಗೆದುಕೊಳ್ಳುವುದು.<br>2) ಎಲ್ಲಾ ವಿಧದ ಸ್ವದೇಶಿ ಮದ್ಯದಂಗಡಿಗಳ ಸನ್ನದು ಮಂಜೂರಾತಿ ಕಡತಗಳು ಹಾಗೂ ಅಂಕಿ ಅಂಶಗಳ ಬಗ್ಗೆ ನಿರ್ವಹಣೆ<br>3) ಅಧೀನ ಹಾಗೂ ಕಛೇರಿ ತಪಾಸಣೆಗಳ ಅನುಸರಣಾ ವರದಿಗಳ ನಿರ್ವಹಣೆ<br>4) ಈ ಕಛೇರಿಯ ಹಾಗೂ ಅಧೀನ ಕಛೇರಿಗಳ ಮಹಾಲೇಖಪಾಲರು ಮತ್ತ ಆಂತರಿಕೆ ಲೆಕ್ಕ ಪರಿಶೋಧಕರ ವರದಿ ಮತ್ತು ಅನುಸರಣಾ ವರದಿಯ ನಿರ್ವಹಣೆ<br>5) ಈ ಕಛೇರಿ ಮಾಸಿಕ ಸಭೆ ಮತ್ತು ನಡವಳಿಗಳನ್ನು ನಿರ್ವಹಿಸುವುದು<br>6) ಅಪರಾಧ ವಿಭಾಗ<br>7) ಕೆ.ಡಿ.ಪಿ ಜಿಲ್ಲಾ ಪಂಚಾಯಿತಿ, ಇತರೆ ಸಭೆಗಳ ಕಡತಗಳ ನಿರ್ವಹಣೆ<br>8) ಆರ್.ಟಿ.ಐ ಮತ್ತು ದೂರು ಅರ್ಜಿಗಳ ವಿಲೇವಾರಿ ಅಧೀನ ಅಬಕಾರ ಅಧಿಕಾರಿಗಳ ದಿನಚರಿಗಳ ಪರಿಶೀಲನೆ<br>9) ಕಾಕಂಬಿ ಹಂಚಿಕೆಗೆ ಸಂಬಂಧಪಟ್ಟ ಕಡತಗಳ ನಿರ್ವಹಣೆಡಿಸ್ಟಿಲರಿಗಳ ಸನ್ನದು ಮಂಜೂರಾತಿ ಕಡತ ಮತ್ತು ಸಂಬಂಧಿಸಿದ ವಿಷಯಗಳ ನಿರ್ವಹಣೆ<br>10) ಡಿ.ಸಿ.ಬಿ ತಃಖ್ತೆ |
| 7 | ಎನ್.ಎನ್.ಸುನಿಲ್ | ಪ್ರಥಮ ದರ್ಜೆ ಸಹಾಯಕರು | 1. ಡಿಸ್ಟಿಲರಿಶಾಖೆಯ ಸ್ಪಿರಿಟ್ ಹಂಚಿಕೆ, ನಿರಾಕ್ಷೇಪಣಾ ಪತ್ರಗಳ ಕಡತ ನಿರ್ವಹಣೆ<br>2. ರಹದಾರಿಗಳನ್ನು ನೀಡುವುದು.<br>3. ಮಾಸಿಕ ಮದ್ಯ ಬಳಕೆ ವರದಿ ಹಾಗೂ ಕೆ.ಎಸ್.ಬಿ.ಸಿ.ಎಲ್ ತಃಖ್ತೆ ನಿರ್ವಹಣೆ<br>4. ಸೈನಿಕ ಮತ್ತು ಇತರೆ ಮುದ್ರೆಗಳ ನಿರ್ವಹಣೆ<br>5. ಟಪಾಲು ಶಾಖೆಯ ನಿರ್ವಹಣೆ<br>6. ರವಾನೆ ಶಾಖೆಯ ನಿರ್ವಹಣೆ<br>7. ಅಂಚೆ ಚೀಟಿ ನಿರ್ವಹಣೆ |
| 8 | ಪ್ರಥಮ ದರ್ಜೆ ಸಹಾಯಕರು | ಹುದ್ದೆ ಖಾಲಿ ಇರುತ್ತದೆ. | |

| ಕ್ರ ಸಂ | ಅಧಿಕಾರಿಗಳ ಹಾಗೂ ನೌಕರರ ಹೆಸರು ಶ್ರೀ/ಶ್ರೀಮತಿ | ಪದನಾಮ | ನಿಯೋಜಿತ ಅಧಿಕಾರಿಗಳ ವಿವರ |
|---|---|---|---|
| 9 | ದ್ವಿ.ದ.ಸಹಾಯಕರು | ಹುದ್ದೆ ಖಾಲಿ ಇರುತ್ತದೆ. | |
| 10 | ದ್ವಿ.ದ.ಸಹಾಯಕರು | ಹುದ್ದೆ ಖಾಲಿ ಇರುತ್ತದೆ. | |
| 11 | ಬೆರಳಚ್ಚುಗಾರರು | ಹುದ್ದೆ ಖಾಲಿ ಇರುತ್ತದೆ. | |
| 12 | ಬೆರಳಚ್ಚುಗಾರರು& ಡಿಇಒ | ಹುದ್ದೆ ಖಾಲಿ ಇರುತ್ತದೆ. | |
| 13 | ಎಂ.ಮಂಜುನಾಥ | ದ್ವಿತೀಯ ದರ್ಜೆ ಸಹಾಯಕರು (ನಿಯೋಜನೆ) | 1. ಅಪರಾಧ ಕ್ರೈಂ ನಮೂದಿಸುವುದು<br>2. ಅಧಿಕಾರಿಗಳು/ಸಿಬ್ಬಂದಿವರ್ಗದವರ ವೇತನ<br>3. ಅಧೀನ ಕಛೇರಿಗಳ ಸಾದಿಲ್ವಾರು ಬಿಲ್ಲು/ಪ್ರಯಾಣ ಭತ್ಯೆ ಬಿಲ್ಲು<br>4. ಬಾಹ್ಯ ಮೂಲಗಳಿಂದ ವಾಹನಚಾಲಕರು/ಕೂಲಿ ಕಾರ್ಮಿಕರ ಸೇವಾ ಬಿಲ್ಲು<br>5. ಅನುದಾನ ಬಿಡುಗಡೆ<br>6. ನಗದು ಪುಸ್ತಕ / ರಶೀದಿ ಪುಸ್ತಕ ನಿರ್ವಹಣೆ<br>7. ಮಾಸಿಕ ವೆಚ್ಚ ತಃಖ್ತೆ |
| 14 | ಅಬಕಾರಿ ಮುಖ್ಯ ರಕ್ಷಕರು | ಹುದ್ದೆ ಖಾಲಿ ಇರುತ್ತದೆ. | – |
| 15 | ಅಬಕಾರಿ ಮುಖ್ಯ ರಕ್ಷಕರು | ಹುದ್ದೆ ಖಾಲಿ ಇರುತ್ತದೆ. | – |
| 16 | ಸಿ.ವಿ.ರಾಘವೇಂದ್ರ | ಅಬಕಾರಿ ರಕ್ಷಕರು | 1. ಹಿರಿಯ ಅಧಿಕಾರಿಗಳ ನಿರ್ದೇಶನದಂತೆ ಗಸ್ತು ತಿರುಗಿ ಕರ್ನಾಟಕ ಅಬಕಾರಿ ಕಾಯ್ದೆ ಹಾಗೂ ಎನ್.ಡಿಪಿಎಸ್ ಕಾಯ್ದೆಯಡಿಯಲ್ಲಿ ಅಕ್ರಮ ಚಟುವಟಿಕೆಗಳಿಗೆ ಸಂಬಂಧಿಸಿದಂತೆ ಮಾಹಿತಿಯನ್ನು ಸಂಗ್ರಹಿಸಿ ತಮ್ಮ ಮೇಲಧಿಕಾರಿಗಳಿಗೆ ಒದಗಿಸುವುದು<br>2. ಪ್ರಥಮ ಮಾಹಿತಿ ವರದಿ, ಅಂತಿಮ ದೋಷಾರೋಪಣಾ ಪಟ್ಟಿ ಸಿಸಿ ವರದಿಗಳನ್ನು ನ್ಯಾಯಾಲಯಕ್ಕೆ ಸಲ್ಲಿಸುವುದು. ಸಿಸಿ ನಂ. ಸಮನ್ಸ್ ನ್ಯಾಯಾಲಯದಿಂದ ಪಡೆದು ಸಮನ್ಸ್ ಗಳನ್ನು ಸಾಕ್ಷಿದಾರರಿಗೆ ಹಾಗೂ ಆರೋಪಿತರಿಗೆ ಜಾರಿಗೊಳಿಸುವುದು.<br>3. ದಸ್ತಗಿರಿ ಮಾಡಲಾದ ಅಪರಾಧಿಯನ್ನು ನ್ಯಾಯಾಲಯಕ್ಕೆ ಹಾಜರುಪಡಿಸಿ, ನ್ಯಾಯಾಂಗ ಬಂಧನದ ಸಂದರ್ಭದಲ್ಲಿ ಅಪರಾಧಿಯನ್ನು ಕಾರಾಗೃಹಕ್ಕೆ ಒಪ್ಪಿಸುವುದು ಅಪರಾಧಿಯು ಇಲಾಖಾ ವಶದಲ್ಲಿರುವಾಗ ಅಥವಾ ಸ್ಥಳದಲ್ಲಿ ದಸ್ತಗಿರಿಯಾದ ಸಂದರ್ಭದಲ್ಲಿ ಅಪರಾಧಿಯು ಸುರಕ್ಷತೆ ಹಾಗೂ ತಪ್ಪಿಸಿಕೊಳ್ಳದಂತೆ ನೋಡಿಕೊಳ್ಳುವುದು.<br>4. ಅಬಕಾರಿ ಧಾಳಿ ಸಂದರ್ಭದಲ್ಲಿ ಸನ್ನದು ಅಂಗಡಿಗಳ ತಪಾಸಣೆ ಸಮಯದಲ್ಲಿ ರಾತ್ರಿ ಗಸ್ತು ಮತ್ತು ರಸ್ತೆಕಾವಲು ಸಂದರ್ಭಗಳಲ್ಲಿ ಅಕ್ರಮ ಸಾಗಾಣಿಕೆ, ಸಂಗ್ರಹಣೆ, ಅಕ್ರಮ ಮಾರಾಟ ಸಂದರ್ಭಗಳಲ್ಲಿ ಅಬಕಾರಿ ವಸ್ತುಗಳು ಹಾಗೂ ವಾಹನಗಳನ್ನು ವಶಪಡಿಸಿಕೊಳ್ಳಲು ತನಿಖಾಧಿಕಾರಿಗಳಿಗೆ ಸಹಾಯ ಮಾಡುವುದು ಹಾಗೂ ವಶಪಡಿಸಿಕೊಂಡ ವಸ್ತುಗಳು ಹಾಗೂ ವಾಹನಗಳನ್ನು ಸುರಕ್ಷತೆ ಬಗ್ಗೆ ಪ್ರಕರಣ ಮುಗಿಯುವವರೆಗೆ ನಿಗಾ ವಹಿಸುವುದು. ಪ್ರಥಮ ವರ್ತಮಾನ ವರದಿಯನ್ನು ದಾಖಲು ಮಾಡಲು ತನಿಖಾಧಿಕಾರಿಗಳಿಗೆ ಸಹಾಯ ಮಾಡುವುದು.<br>5. ರಾಸಾಯನಿಕ ಮಾದರಿಗಳನ್ನು ರಾಸಾಯನಿಕ ಪ್ರಯೋಗಾಲಯಕ್ಕೆ ತೆಗೆದುಕೊಂಡು ಹೋಗಿ ಪರೀಕ್ಷೆಯ ನಂತರ ವರದಿ ತರುವುದು |

| ಕ್ರ ಸಂ | ಅಧಿಕಾರಿಗಳ ಹಾಗೂ ನೌಕರರ ಹೆಸರು ಶ್ರೀ/ಶ್ರೀಮತಿ | ಪದನಾಮ | ನಿಯೋಜಿತ ಅಧಿಕಾರಿಗಳ ವಿವರ |
|---|---|---|---|
| | | | 6. ಸಾರ್ವಜನಿಕ ಸ್ಥಳಗಳಲ್ಲಿ ಇರುವಂಥ ಅಕ್ರಮ ಅಬಕಾರಿ ವಸ್ತುಗಳನ್ನು ವಶಪಡಿಸಿಕೊಂಡು ಮುಂದಿನ ಸೂಕ್ತ ಕ್ರಮಕ್ಕಾಗಿ ಮೇಲಧಿಕಾರಿಗಳಿಗೆ ಒಪ್ಪಿಸುವುದು<br>7. ಪ್ರಾದೇಶಿಕ ಸಾರಿಗೆ ಕಛೇರಿಯಿಂದ ವಶಪಡಿಸಿಕೊಂಡ ವಾಹನದ ಬಿ ಎಕ್ಸ್ ಟ್ರ್ಯಾಕ್ಸ್ ಪ್ರತಿಯನ್ನು ತರುವುದು. ಕಛೇರಿಗೆ ಸಂಬಂಧಿಸಿದ ಟಪಾಲನ್ನು ನಿಗದಿಪಡಿಸಿದ ವಿಳಾಸಕ್ಕೆ ತಲುಪಿಸುವುದು ಮತ್ತು ತರುವುದು.<br>8. ಕರ್ತವ್ಯದಲ್ಲಿರುವ ಸಮಯದಲ್ಲಿ ಸಮವಸ್ತ್ರ ಹಾಗೂ ಇಲಾಖೆ ನೀಡಿರುವ ಸುರಕ್ಷತಾ ವಸ್ತುಗಳನ್ನು ಹೊಂದಿರತಕ್ಕದಲ್ಲ<br>9. ಅಬಕಾರಿ ಪ್ರಕರಣಗಳಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡ ಸ್ವತ್ತನ್ನು ವಿಲೇವಾರಿ/ನಾಶ ಮಾಡುವ ಪ್ರಕ್ರಿ೦ಯೆಯಲ್ಲಿ ಭಾಗವಹಿಸಿ ಕಾರ್ಯನಿರ್ವಹಿಸುವುದು<br>10. ಕರ್ತವ್ಯ ನಿರ್ವಹಿಸಿರುವ ಬಗ್ಗೆ ಮಾಹಿತಿಗಳನ್ನು ಕ್ರಮಬದ್ಧವಾಗಿ ಒಂದು ಪುಸ್ತಕದಲ್ಲಿ ಬರೆದು ನಿರ್ವಹಿಸತಕ್ಕದ್ದು. |
| 17 | ವಾಹನ ಚಾಲಕರು | ಹುದ್ದೆ ಖಾಲಿ ಇರುತ್ತದೆ. | – |
| 18 | ವಾಹನ ಚಾಲಕರು | ಹುದ್ದೆ ಖಾಲಿ ಇರುತ್ತದೆ. | – |
| 19 | ವಾಹನ ಚಾಲಕರು | ಹುದ್ದೆ ಖಾಲಿ ಇರುತ್ತದೆ. | – |
| 20 | ವಾಹನ ಚಾಲಕರು | ಹುದ್ದೆ ಖಾಲಿ ಇರುತ್ತದೆ. | – |
| 21 | ವಾಹನ ಚಾಲಕರು | ಹುದ್ದೆ ಖಾಲಿ ಇರುತ್ತದೆ. | – |
| 22 | ಸಿದ್ದಗಂಗಮ್ಮ | ಗ್ರೂಪ್ ಡಿ ನೌಕರರು | ಖಜಾನೆ, ಬ್ಯಾಂಕಿನ ಕೆಲಸಗಳ ನಿರ್ವಹಣೆ ಹಾಗೂ ಮುದ್ದಾಂ ವಿತರಣೆ |
| 23 | ಗೌರಮ್ಮ | ಗ್ರೂಪ್ ಡಿ ನೌಕರರು (ನಿಯೋಜನೆ) | ಕಚೇರಿ ಕೆಲಸಗಳ ನಿರ್ವಹಣೆ |

**III. ಮೇಲ್ವಿಚಾರಣೆ ಮತ್ತು ಹೊಣೆಗಾರಿಕೆಯ ಮಾರ್ಗಗಳು ಸೇರಿದಂತೆ ತೀರ್ಮಾನ ತೆಗೆದುಕೊಳ್ಳುವ ಪ್ರಕ್ರಿಯೆಯಲ್ಲಿ ಅನುಸರಿಸಬೇಕಾದ ಕಾರ್ಯವಿಧಾನಗಳು:**

ವಿಷಯ ನಿರ್ವಾಹಕರಿಂದ ಕಡತಗಳನ್ನು ಕಛೇರಿ ಅಧೀಕ್ಷಕರು ಹಾಗೂ ಅಬಕಾರಿ ಉಪ ಅಧೀಕ್ಷಕರ ಮೂಲಕ ಅಬಕಾರಿ ಉಪ ಆಯುಕ್ತರಿಗೆ ಸಲ್ಲಿಸಲಾಗುತ್ತದೆ. ಕಡತಗಳಲ್ಲಿ ವಿಷಯ ನಿರ್ವಾಹಕರು, ಕಛೇರಿ ಅಧೀಕ್ಷಕರು ಹಾಗೂ ಅಬಕಾರಿ ಉಪ ಅಧೀಕ್ಷಕರು ನಿಯಮಾನುಸಾರ ಮಂಡಿಸುವ ಟಿಪ್ಪಣಿ ಅನುಸರಿಸಿ ನಿರ್ಧಾರಗಳನ್ನು ಕೈಗೊಳ್ಳಲಾಗುವುದು.

**IV. ಕಛೇರಿ ಕಾರ್ಯಗಳ ನಿರ್ವಹಣೆಗೆ ರೂಪಿಸಿರುವ ಸೂತ್ರಗಳು:**

ಅಬಕಾರಿ ಕಾಯ್ದೆಯಲ್ಲಿ, ಅಬಕಾರಿ ಕೈಪಿಡಿಯಲ್ಲಿ ಮತ್ತು ಕಛೇರಿ ಕೈಪಿಡಿಯಲ್ಲಿ ಸೂಚಿಸಿರುವಂತೆ.

**V. ಕಛೇರಿ ಕಾರ್ಯಗಳನ್ನು ನೆರವೇರಿಸುವುದಕ್ಕಾಗಿ ಹೊಂದಿರುವ ಅಥವಾ ನಿಯಂತ್ರಣದಲ್ಲಿರುವ ಅಥವಾ ಉದ್ಯೋಗಿಗಳು ಬಳಸುವ ನಿಯಮಗಳು, ವಿನಿಮಯಗಳು, ಅನುಸೂಚಿಗಳು, ಕೈಪಿಡಿಗಳು ಮತ್ತು ದಾಖಲೆಗಳು:**

ಕರ್ನಾಟಕ ಅಬಕಾರಿ ಕಾಯ್ದೆಯಲ್ಲಿ ಇಲಾಖೆಗೆ ಸಂಬಂಧಿಸಿದ ನಿಯಮಗಳು, ಅಬಕಾರಿ ಕೈಪಿಡಿ, ಕಛೇರಿ ಕೈಪಿಡಿ ಹಾಗೂ ಸರ್ಕಾರ ಕಾಲಕಾಲಕ್ಕೆ ರೂಪಿಸುವ ನಿಯಮಗಳು, ಕೆ.ಸಿ.ಎಸ್.ಆರ್, ಸರ್ಕಾರಿ ಆದೇಶಗಳು ಹಾಗೂ ಇತರೆ ಹೆಚ್ಚಿನ ಮಾಹಿತಿಯನ್ನು ಅಳವಡಿಸಿಕೊಳ್ಳಲಾಗಿದೆ.

**VI. ಕಛೇರಿ ಹೊಂದಿರುವ ಅಥವಾ ನಿಯಂತ್ರಣದಲ್ಲಿರುವ ದಸ್ತಾವೇಜುಗಳ ಪ್ರವರ್ಗಗಳ ವಿವರ ಪಟ್ಟಿ:**

ದಸ್ತಾವೇಜುಗಳನ್ನು ಈ ಕೆಳಕಂಡಂತೆ ವರ್ಗೀಕರಿಸಿ ಇಟ್ಟುಕೊಳ್ಳಲಾಗಿದೆ.

(ಅ.) ಆಡಳಿತ ವಿಷಯಕ್ಕೆ ಸಂಬಂಧಿಸಿದ ಅಧಿಸೂಚನೆ, ಸುತ್ತೋಲೆ, ಆದೇಶ ಹಾಗೂ ಮಾರ್ಗಸೂಚಿಗಳು.

(ಆ) ಅಧಿಕಾರಿಗಳು/ನೌಕರರ ಸೇವಾ ವಿವರಗಳು.

(ಇ) ಪ್ರತಿ ಕಛೇರಿಗಳು ಕಾರ್ಯನಿರ್ವಹಿಸುತ್ತಿರುವ ಕಛೇರಿಗಳ ವಿಳಾಸ/ದೂರವಾಣಿ ವಿವರಗಳು.

**VII. ಕಛೇರಿ ಕಾರ್ಯನೀತಿಯ ರಚನೆ ಅದರ ಅನುಷ್ಠಾನಕ್ಕೆ ಸಂಬಂಧಿಸಿದಂತೆ ಸಾರ್ವಜನಿಕರೊಡನೆ ಸಮಾಲೋಚಿಸಲು ಅಥವಾ ಅವರ ಪ್ರಾಧಿನಿಧ್ಯವಿರುವಂತೆ ಮಾಡಲು ಇರುವಂಥ ಯಾವುದೇ ವ್ಯವಸ್ಥೆಯ ವಿವರಗಳು:**

ಜಿಲ್ಲಾ ಕಛೇರಿಗೆ ಸಂಬಂಧಿಸಿದ ಹೊಸ ನೀತಿ ನಿರ್ಣಯಗಳನ್ನು ಸರ್ಕಾರ/ಇಲಾಖೆ ಮುಖ್ಯಾಧಿಕಾರಿಗಳು ಹಂತದಲ್ಲಿ ತೆಗೆದುಕೊಳ್ಳಲಾಗುತ್ತದೆ. ಈ ರೀತಿ ತೆಗೆದುಕೊಳ್ಳಲಾಗುವ ನೀತಿಗಳನ್ನು ಅನುಷ್ಠಾನಗೊಳಿಸುವಲ್ಲಿ ಉಂಟಾಗುವ ನ್ಯೂನತೆಗಳ ಬಗ್ಗೆ ಯಾವುದಾದರೂ ದೂರುಗಳು ಬಂದಲ್ಲಿ ಆದ್ಯತೆ ಮೇಲೆ ನಿಯಮಾನುಸಾರ ಕ್ರಮ ತೆಗೆದುಕೊಳ್ಳಲಾಗುವುದು. ಸಾರ್ವಜನಿಕರು ಹಾಗೂ ಜನತಾ ಪ್ರತಿನಿಧಿಗಳಿಗೆ ಕಛೇರಿ ದಿನಗಳಂದು ಸಂಬಂಧ ಪಟ್ಟ ಅಧಿಕಾರಿಗಳನ್ನು ಭೇಟಿ ಮಾಡಲು ಅವಕಾಶ ನೀಡಲಾಗಿದ್ದು, ಅವರುಗಳು ಲಿಖಿತವಾಗಿ ಹಾಗೂ ಮೌಖಿಕವಾಗಿ ನೀಡುವ ದೂರುಗಳನ್ನು ಕಾನೂನಿನ ಅಡಿ ಪರಿಶೀಲಿಸಿ ಕ್ರಮ ತೆಗೆದುಕೊಳ್ಳಲಾಗುತ್ತದೆ.

**VIII. ಮಂಡಳಿಗಳು, ಪರಿಷತ್ತುಗಳು, ಸಮಿತಿಗಳು ಅಥವಾ ಇತರ ನಿಕಾಯಗಳು ಮತ್ತು ಅದರ ಭಾಗವಾಗಿ ಅಥವಾ ಅದರ ಸಲಹೆಯ ಉದ್ದೇಶಕ್ಕಾಗಿ ರಚಿತವಾದ ಇಬ್ಬರು ಅಥವಾ ಹೆಚ್ಚು ವ್ಯಕ್ತಿಗಳನ್ನೊಳಗೊಂಡ ಮಂಡಳಿಗಳ, ಪರಿಷತ್ತುಗಳ, ಸಮಿತಿಗಳ ಮತ್ತು ಇತರ ನಿಕಾಯಗಳ ಸಭೆಗಳು ಸಾರ್ವಜನಿಕರಿಗೆ ಮುಕ್ತವಾಗಿರುತ್ತವೆ0ಯೇ ಎಂಬುದರ ವಿವರ ಪಟ್ಟಿಕೆ:**

ಜಿಲ್ಲಾ ಮಟ್ಟದ ಕಛೇರಿಗಳಲ್ಲಿ ಇಂತಹ ಯಾವುದೇ ಮಂಡಳಿಗಳು, ಪರಿಷತ್, ಸಮಿತಿಗಳು ಹಾಗೂ ಇತರೆ ನಿಗಮಗಳು ರಚಿಸಲ್ಪಟ್ಟಿರುವುದಿಲ್ಲ.

**IX. ಅಧಿಕಾರಿಗಳ ಮತ್ತು ನೌಕರರ ನಿರ್ದೇಶಿಕೆ:**

| ಕ್ರ. ಸಂ | ಅಧಿಕಾರಿಗಳ ಹಾಗೂ ನೌಕರರ ಹೆಸರು ಶ್ರೀ/ಶ್ರೀಮತಿ | ಪದನಾಮ | ದೂರವಾಣಿ ಸಂಖ್ಯೆ | ಕಾರ್ಯನಿರ್ವಹಣೆ |
|---|---|---|---|---|
| 1 | ಎಸ್.ಶ್ರೀನಿವಾಸಮೂರ್ತಿ | ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಸ್ | 08113–7204307<br>08113–7271055 | ಭಾಗ–II. ರ ಅಧಿಕಾರಿಗಳು ಮತ್ತು ನೌಕರರ ಅಧಿಕಾರ ಮತ್ತು ಕರ್ತವ್ಯಗಳಲ್ಲಿ ವಿವರಿಸಿರುವಂತೆ |
| 2 | ಅಬಕಾರಿ ಉಪ ಅಧೀಕ್ಷಕರು | ಹುದ್ದೆ ಖಾಲಿ ಇರುತ್ತದೆ. | – | – |
| 3 | ಡಿ.ದೇಮಣ್ಣ(ನಿಯೋಜನೆ) | ಕಛೇರಿ ಅಧೀಕ್ಷಕರು | 08113–7271059 | ಭಾಗ–II. ರ ಅಧಿಕಾರಿಗಳು ಮತ್ತು ನೌಕರರ ಅಧಿಕಾರ ಮತ್ತು ಕರ್ತವ್ಯಗಳಲ್ಲಿ ವಿವರಿಸಿರುವಂತೆ |
| 4 | ಅಬಕಾರಿ ನಿರೀಕ್ಷಕರು | ಹುದ್ದೆ ಖಾಲಿ ಇರುತ್ತದೆ | | |
| 5 | ಅಬಕಾರಿ ಉಪ ನಿರೀಕ್ಷಕರು | ಹುದ್ದೆ ಖಾಲಿ ಇರುತ್ತದೆ | | |
| 6 | ಟಿ.ಎನ್.ಕೋಮಲ | ಶೀಘ್ರಲಿಪಿಗಾರರು | 08113–7271059 | ಭಾಗ–II. ರ ಅಧಿಕಾರಿಗಳು ಮತ್ತು ನೌಕರರ ಅಧಿಕಾರ ಮತ್ತು ಕರ್ತವ್ಯಗಳಲ್ಲಿ ವಿವರಿಸಿರುವಂತೆ |
| 7 | ಎನ್.ಎನ್.ಸುನೀಲ್ | ಪ್ರಥಮ ದರ್ಜೆ ಸಹಾಯಕರು | 08113–7271059 | ಭಾಗ–II. ರ ಅಧಿಕಾರಿಗಳು ಮತ್ತು ನೌಕರರ ಅಧಿಕಾರ ಮತ್ತು ಕರ್ತವ್ಯಗಳಲ್ಲಿ ವಿವರಿಸಿರುವಂತೆ |
| 8 | ಪ್ರಥಮದರ್ಜೆ ಸಹಾಯಕರು | ಹುದ್ದೆ ಖಾಲಿ ಇರುತ್ತದೆ. | – | – |
| 9 | ದ್ವಿತೀಯದರ್ಜೆ ಸಹಾಯಕರು | ಹುದ್ದೆ ಖಾಲಿ ಇರುತ್ತದೆ | – | – |
| 10 | ದ್ವಿತೀಯದರ್ಜೆ ಸಹಾಯಕರು | ಹುದ್ದೆ ಖಾಲಿ ಇರುತ್ತದೆ | – | – |
| 11 | ಬೆರಳಚ್ಚುಗಾರರು | ಹುದ್ದೆ ಖಾಲಿ ಇರುತ್ತದೆ | – | – |

| ಕ್ರ ಸಂ | ಅಧಿಕಾರಿಗಳ ಹಾಗೂ ನೌಕರರ ಹೆಸರು ಶ್ರೀ/ಶ್ರೀಮತಿ | ಪದನಾಮ | ದೂರವಾಣಿ ಸಂಖ್ಯೆ | ಕಾರ್ಯನಿರ್ವಹಣೆ |
|---|---|---|---|---|
| 12 | ಬೆರಳಚ್ಚುಗಾರರು/ಡಿಇಒ | ಹುದ್ದೆ ಖಾಲಿ ಇರುತ್ತದೆ | – | – |
| 13 | ಎಂ.ಮಂಜುನಾಥ (ನಿಯೋಜನೆ) | ದ್ವಿತೀಯ ದರ್ಜೆ ಸಹಾಯಕರು | 08113–7271059 | ಭಾಗ–II. ರ ಅಧಿಕಾರಿಗಳು ಮತ್ತು ನೌಕರರ ಅಧಿಕಾರ ಮತ್ತು ಕರ್ತವ್ಯಗಳಲ್ಲಿ ವಿವರಿಸಿರುವಂತೆ |
| 14 | ಅಬಕಾರಿ ಮುಖ್ಯ ರಕ್ಷಕರು | ಹುದ್ದೆ ಖಾಲಿ ಇರುತ್ತದೆ. | – | – |
| 15 | ಅಬಕಾರಿ ಮುಖ್ಯ ರಕ್ಷಕರು | ಹುದ್ದೆ ಖಾಲಿ ಇರುತ್ತದೆ. | – | – |
| 16 | ಸಿ.ವಿ.ರಾಘವೇಂದ್ರ | ಅಬಕಾರಿ ರಕ್ಷಕರು | – | ಭಾಗ–II. ರ ಅಧಿಕಾರಿಗಳು ಮತ್ತು ನೌಕರರ ಅಧಿಕಾರ ಮತ್ತು ಕರ್ತವ್ಯಗಳಲ್ಲಿ ವಿವರಿಸಿರುವಂತೆ |
| 17 | ವಾಹನ ಚಾಲಕರು | ಹುದ್ದೆ ಖಾಲಿ ಇರುತ್ತದೆ | – | – |
| 18 | ವಾಹನ ಚಾಲಕರು | ಹುದ್ದೆ ಖಾಲಿ ಇರುತ್ತದೆ | – | – |
| 19 | ವಾಹನ ಚಾಲಕರು | ಹುದ್ದೆ ಖಾಲಿ ಇರುತ್ತದೆ | – | – |
| 20 | ವಾಹನ ಚಾಲಕರು | ಹುದ್ದೆ ಖಾಲಿ ಇರುತ್ತದೆ | – | – |
| 21 | ವಾಹನ ಚಾಲಕರು | ಹುದ್ದೆ ಖಾಲಿ ಇರುತ್ತದೆ. | – | – |
| 22 | ಸಿದ್ದಗಂಗಮ್ಮ | ಗ್ರೂಪ್ ಡಿ ನೌಕರರು | 08113–7271059 | ಭಾಗ–II. ರ ಅಧಿಕಾರಿಗಳು ಮತ್ತು ನೌಕರರ ಅಧಿಕಾರ ಮತ್ತು ಕರ್ತವ್ಯಗಳಲ್ಲಿ ವಿವರಿಸಿರುವಂತೆ |
| 23 | ಗೌರಮ್ಮ | ಗ್ರೂಪ್ ಡಿ ನೌಕರರು (ನಿಯೋಜನೆ) | 08113–7271059 | ಭಾಗ–II. ರ ಅಧಿಕಾರಿಗಳು ಮತ್ತು ನೌಕರರ ಅಧಿಕಾರ ಮತ್ತು ಕರ್ತವ್ಯಗಳಲ್ಲಿ ವಿವರಿಸಿರುವಂತೆ |

**X. ನಿಯಮಗಳಲ್ಲಿ ಸಂಬಂಧಿಸಿರುವಂತೆ ಪರಿಹಾರದ ವ್ಯವಸ್ಥೆಯೂ ಸೇರಿ ಪ್ರತಿಯೊಬ್ಬ ಅಧಿಕಾರಿ ಮತ್ತು ನೌಕರನು ಪಡೆಯುವ ತಿಂಗಳ ಸಂಬಳ/ಗೌರವಧನ:**

| ಕ್ರ ಸಂ | ಅಧಿಕಾರಿಗಳ ಹಾಗೂ ನೌಕರರ ಹೆಸರು | ವೇತನ ಶ್ರೇಣಿ | ಮೂಲ ವೇತನ | ತಾತ್ಕಾಲಿಕ ಪರಿಹಾರ | ತುಟ್ಟಿ ಭತ್ಯೆ | ವಾಹನ ಭತ್ಯೆ,ನಿಗದಿತ ಪ್ರಯಾಣ ಭತ್ಯೆ ಮನೆ ಬಾಡಿಗೆ ಭತ್ಯೆ | ಇತರೆ ಭತ್ಯೆ ವೈದ್ಯಕೀಯ ಸಮವಸ್ತ್ರ ಭತ್ಯೆ | ಒಟ್ಟು ವೇತನ |
|---|---|---|---|---|---|---|---|---|
| 1 | ಎಸ್.ಶ್ರೀನಿವಾಸಮೂರ್ತಿ ಅಬಕಾರಿ ಉಪ ಆಯುಕ್ತರು | 20025–28275 | 21600 | 3240 | 15012 | 2160 | – | 42012 |
| 2 | ಅಬಕಾರಿ ಉಪ ಅಧೀಕ್ಷಕರು | ಖಾಲಿ | | | | | | |
| 3 | ಎಸ್.ಎಂ.ಮಹೇಶ, ಕಛೇರಿ ಅಧೀಕ್ಷಕರು | 7275–13250 | 10250 | 1538 | 7124 | 1025 | 50 | 19987 |
| 4 | ಅಬಕಾರಿ ನಿರೀಕ್ಷಕರು | ಖಾಲಿ | | | | | | |
| 5 | ಅಬಕಾರಿ ಉಪ ನಿರೀಕ್ಷಕರು | ಖಾಲಿ | | | | | | |
| 6 | ಟಿ.ಎನ್.ಕೋಮಲ, ಶೀಘ್ರಲಿಪಿಗಾರರು | 7275–13250 | 8000 +110 | 1200 | 5560 | 800 | 50 | 15720 |

| ಕ್ರ ಸಂ | ಅಧಿಕಾರಿಗಳ ಹಾಗೂ ನೌಕರರ ಹೆಸರು | ವೇತನ ಶ್ರೇಣಿ | ಮೂಲ ವೇತನ | ತಾತ್ಕಾಲಿಕ ಪರಿಹಾರ | ತುಟ್ಟಿ ಭತ್ಯೆ | ವಾಹನ ಭತ್ಯೆ,ನಿಗದಿತ ಪ್ರಯಾಣ ಭತ್ಯೆ ಮನೆ ಬಾಡಿಗೆ ಭತ್ಯೆ | ಇತರೆ ಭತ್ಯೆ ವೈದ್ಯಕೀಯ ಸಮವಸ್ತ್ರ ಭತ್ಯೆ | ಒಟ್ಟು ವೇತನ |
|---|---|---|---|---|---|---|---|---|
| 7 | ಎನ್.ಎನ್.ಸುನೀಲ್ ಪ್ರಥಮದರ್ಜೆಸಹಾಯಕರು | 7275–13250 | 7625 | 1144 | 5299 | 763 | 50 | 14881 |
| 8 | ಪ್ರಥಮದರ್ಜೆಸಹಾಯಕರು | ಖಾಲಿ | | | | | | |
| 9 | ದ್ವಿತೀಯದರ್ಜೆಸಹಾಯಕರು | | | | | | | |
| 10 | ದ್ವಿತೀಯದರ್ಜೆಸಹಾಯಕರು | ಖಾಲಿ | | | | | | |
| 11 | ಬೆರಳಚ್ಚುಗಾರರು | ಖಾಲಿ | | | | | | |
| 12 | ಬೆರಳಚ್ಚುಗಾರರು & ಡಿ.ಇ.ಓ | ಖಾಲಿ | | | | | | |
| 13 | ಅಬಕಾರಿ ಮುಖ್ಯ ರಕ್ಷಕರು | ಖಾಲಿ | | | | | | |
| 14 | ಅಬಕಾರಿ ಮುಖ್ಯ ರಕ್ಷಕರು | ಖಾಲಿ | | | | | | |
| 15 | ರಾಘವೇಂದ್ರ ಸಿ.ವಿ., ಅಬಕಾರಿ ರಕ್ಷಕರು | 5800–10500 | 5800 | 870 | 4031 | 580 | 50 | 11331 |
| 16 | ವಾಹನ ಚಾಲಕರು | ಖಾಲಿ | | | | | | |
| 17 | ವಾಹನ ಚಾಲಕರು | ಖಾಲಿ | | | | | | |
| 18 | ವಾಹನ ಚಾಲಕರು | ಖಾಲಿ | | | | | | |
| 19 | ವಾಹನ ಚಾಲಕರು | ಖಾಲಿ | | | | | | |
| 20 | ಸಿದ್ದಗಂಗಮ್ಮ, ಗ್ರೂಪ್ ಡಿ ನೌಕರರು | 4800–7275 | 5100 | 765 | 3545 | 510 | 50 | 9970 |

**XI. ಎಲ್ಲ ಯೋಜನೆಗಳ ವಿವರಗಳನ್ನು ಸೂಚಿಸುವ, ಪ್ರಸ್ತಾವಿತ ವೆಚ್ಚಗಳನ್ನು ಮತ್ತು ಮಾಡಲಾದ ಬಟವಾಡೆಗಳ ವರದಿಯನ್ನು ಸೂಚಿಸಿ, ಅದರ ಪ್ರತಿಯೊಂದನ್ನು ಏಜೆನ್ಸಿಗೆ ಹಂಚಿಕೆ ಮಾಡಲಾದ ಆಯವ್ಯಯ:**

ಲೆಕ್ಕಶೀರ್ಷಿಕೆ : 2039–00–001–0–01ಯೋಜನೇತರ (2011–12ನೇ ಸಾಲಿನ ಡಿಸೆಂಬರ್–2011ರವರೆಗೆ ಸಂಬಂಧಿಸಿದ ಮಾಹಿತಿ)

| ಕ್ರ ಸಂ | ಕೋಡ್ ನಂಬರ್ | ವಿವರ | ಬಿಡುಗಡೆಯಾದ ಅನುದಾನ | ಈವರೆಗಿನ ಒಟ್ಟುವೆಚ್ಚ | ಉಳಿಕೆ ಮೊತ್ತ | ಷರಾ |
|---|---|---|---|---|---|---|
| 1 | 041 | ಪ್ರಯಾಣ ವೆಚ್ಚ | 10000 | – | 10000 | |
| 2 | 051 | ಸಾಮಾನ್ಯ ವೆಚ್ಚ | 165000 | 100166 | 64834 | |
| 3 | 071 | ಕಟ್ಟಡ ವೆಚ್ಚ | 335000 | 274030 | 60970 | |
| 4 | 195 | ಸಾರಿಗೆ ವೆಚ್ಚ | 1000000 | 961519 | 38481 | |
| 5 | 015 | ಪೂರಕ ವೆಚ್ಚ | 520000 | 448126 | 71874 | |
| 6 | 059 | ಇತರೆವೆಚ್ಚ 2039–00–800–0–02 | 1000000 | 903048 | 96952 | |
| | | ಒಟ್ಟು | 3030000 | 2686889 | 343111 | |

**XII. ಹಂಚಿಕೆ ಮಾಡಲಾದ ಮೊಬಲಗುಗಳನ್ನು ಒಳಗೊಂಡು, ಸಹಾಯಧನ ಕಾರ್ಯಕ್ರಮಗಳ ಜಾರಿಯ ವಿಧಾನವನ್ನು ಮತ್ತು ಅಂತಹ ಕಾರ್ಯಕ್ರಮಗಳ ಫಲಾನುಭವಿಗಳ ವಿವರಗಳು:**

ಈ ಕಚೇರಿಯಿಂದ ಸಹಾಯಧನ ನೀಡುವ ಯಾವ ಯೋಜನೆಯೂ ಇರುವುದಿಲ್ಲ.

**XIII. ಕಛೇರಿಯಿಂದ ನೀಡಿರುವ ರಿಯಾಯಿತಿಗಳನ್ನು, ಅನುಮತಿ ಪತ್ರಗಳನ್ನು ಅಥವಾ ಅಧಿಕಾರ ಪತ್ರಗಳನ್ನು ಪಡೆಯುವವರ ವಿವರ.**

ಜಿಲ್ಲೆಯಲ್ಲಿ ಪ್ರತಿ ವರ್ಷ ಮದ್ಯ ಮಾರಾಟಕ್ಕೆ ಸಂಬಂಧಿಸಿದಂತೆ ವಿವಿಧ ಸನ್ನದುಗಳನ್ನು ನವೀಕರಿಸಿ ನೀಡಲಾಗುತ್ತದೆ. 2011–12 ನೇ ಸಾಲಿನಲ್ಲಿ (ಡಿಸೆಂಬರ್–2011ರವರೆಗೆ) ನವೀಕರಿಸಿರುವ ವಿವಿಧ ಸನ್ನದುಗಳ ವಿವರ.

| ಕ್ರ ಸಂ | ಸನ್ನದು ವಿಧ | ಸನ್ನದು ಸ್ವರೂಪ | ಸನ್ನದುಗಳ ಸಂಖ್ಯೆ |
|---|---|---|---|
| 1 | – | ಡಿಸ್ಟಿಲರಿ | 2 |
| 2 | – | ವೈನರಿ | 2 |
| 3 | ಸಿಎಲ್–2 | ಚಿಲ್ಲರೆ ಮದ್ಯ ಮಾರಾಟ ಮಳಿಗೆಗಳು | 88 |
| 4 | ಸಿಎಲ್–4 | ಕ್ಲಬ್ ಗಳು | 2 |
| 5 | ಸಿಎಲ್–7 | ಬೋರ್ಡಿಂಗ್ ಮತ್ತು ಲಾಡ್ಜಿಂಗ್ | 5 |
| 6 | ಸಿಎಲ್–9 | ಬಾರ್ ಅಂಡ್ ರೆಸ್ಟೋರೆಂಟ್ ಗಳು | 56 |
| 7 | ಸಿಎಲ್–15 | ಜಂಗಲ್ ಲಾಡ್ಜ್ | 1 |
| 8 | ಆರ್.ವಿ.ಬಿ | ಪಬ್ | 1 |
| 9 | ಆರ್.ಎಸ್–2 | ಮದ್ಯಸಾರ ಬಳಕೆಯ ಸನ್ನದುಗಳು | 6 |
| 10 | ಡಿ.ಎಲ್–3 | ಎಥೆನಾಲ್ ಬಳಕೆಯ ಸನ್ನದುಗಳು | 3 |
| 11 | ಕಾಕಂಬಿ | ಕಾಕಂಬಿ ಉಪಯೋಗಿಸಿ ಪಶು ಆಹಾರ ತಯಾರಿಕಾ ಘಟಕಗಳು | 3 |
| | ಸಕ್ಕರೆ ಕಾರ್ಖಾನೆ | ಕಾಕಂಬಿ ಉತ್ಪಾದನಾ ಘಟಕ | 1 |
| 12 | ಸಿಎಲ್–11 ಸಿ | ಎಂ.ಎಸ್.ಐ.ಎಲ್. ಸಂಸ್ಥೆಯ ಚಿಲ್ಲರೆ ಮದ್ಯ ಮಾರಾಟ ಮಳಿಗೆಗಳು | 10 |
| 13 | ವೈನ್‌ಬೋಟಿಕ್ | | 1 |
| 14 | ವೈನ್‌ಟ್ಯಾವರಿನ್ | | 1 |
| | | **ಒಟ್ಟು** | **182** |

**XIV. ಕಛೇರಿಯಲ್ಲಿ ಲಭ್ಯವಿರುವ ಅಥವಾ ಹೊಂದಿರುವ ವಿದ್ಯುನ್ಮಾನ ರೂಪಕ್ಕೆ ಪರಿವರ್ತಿಸಿರುವ ಮಾಹಿತಿಗೆ ಸಂಬಂಧಿಸಿದ ವಿವರಗಳು:**

ಐಎಂಎಲ್ ಬಳಕೆಯ ವಿವರ, ಡಿಸ್ಟಿಲರಿ ಶಾಖೆ ವಿವರಗಳು, ರಾಜಸ್ವ ಸಂಗ್ರಹಣೆಯ ವಿವರ, ದೂರು ಅರ್ಜಿಗಳ ವಿವರ, ಅಪರಾಧ ವಿವರ, ಸಿಬ್ಬಂದಿಗಳ ಎಲ್ಲಾ ವಿವರ, ಬಿಲ್ಲುಗಳ ವಿವರ ಇತ್ಯಾದಿ ಹಾಗೂ ಇತರೆ ಎಲ್ಲಾ ಅಗತ್ಯ ಮಾಹಿತಿಗಳನ್ನು ಕಂಪ್ಯೂಟರ್‌ನಲ್ಲಿ ಅಳವಡಿಸಲಾಗಿದೆ.

**XV. ಸಾರ್ವಜನಿಕರ ಉಪಯೋಗಕ್ಕಾಗಿ ಗ್ರಂಥಾಲಯವನ್ನು ಅಥವಾ ವಾಚನಾಲಯವನ್ನು ನಿರ್ವಹಿಸುತ್ತಿದ್ದಲ್ಲಿ ಅದರ ಕೆಲಸದ ಸಮಯವನ್ನೊಳಗೊಂಡಂತೆ ಮಾಹಿತಿ ಪಡೆಯಲು ಸಾರ್ವಜನಿಕರಿಗೆ ಲಭ್ಯವಿರುವ ಸೌಲಭ್ಯಗಳ ವಿವರಗಳು:**

ಕಛೇರಿಯ ಸಮಯ ಬೆಳಿಗ್ಗೆ 10.00 ರಿಂದ ಸಂಜೆ 5.30 ರವರೆಗೆ. ಈ ಅವಧಿಯಲ್ಲಿ ಸಾರ್ವಜನಿಕರು ತಮ್ಮ ಅಹವಾಲುಗಳನ್ನು ಸಲ್ಲಿಸಬಹುದಾಗಿದ್ದು, ಈ ಬಗ್ಗೆ ಸಾರ್ವಜನಿಕ ದೂರು ಅರ್ಜಿ ವಹಿಯನ್ನು ತೆರೆದಿದ್ದು, ಅವರ ಅಹವಾಲನ್ನು ವಹಿಯಲ್ಲಿ ನಮೂದಿಸಿ ಅಗತ್ಯ ಕ್ರಮ ಕೈಗೊಳ್ಳಲಾಗುತ್ತಿದೆ.

**XVI. ಸಾರ್ವಜನಿಕ ಮಾಹಿತಿ ಅಧಿಕಾರಿಗಳ ಹೆಸರುಗಳು, ಪದನಾಮಗಳು ಮತ್ತು ಇತರ ವಿವರಗಳು:**

**ಜಿಲ್ಲಾ ಅಬಕಾರಿ ಇಲಾಖೆಯಲ್ಲಿ ಮಾಹಿತಿ ಹಕ್ಕು ಅಧಿನಿಯಮದಡಿ ಮಾಹಿತಿ ಒದಗಿಸುವ ಅಧಿಕಾರಿಗಳ ವಿವರ.**

| ಕ್ರ ಸಂ | ಕಛೇರಿ ಹೆಸರು | ಮಾಹಿತಿ ಪಡೆಯುವ ಹಕ್ಕು ಕಾಯ್ದೆ 2005ರ ಸೆಕ್ಷನ್ 5(1) ರ ಪ್ರಕಾರ ರಾಜ್ಯ ಮಟ್ಟದಲ್ಲಿ "ಸಾರ್ವಜನಿಕ ಮಾಹಿತಿ ಅಧಿಕಾರಿ" | ಮಾಹಿತಿ ಪಡೆಯುವ ಹಕ್ಕು ಕಾಯ್ದೆ 2005ರ ಸೆಕ್ಷನ್ 5(2) ರ ಪ್ರಕಾರ ರಾಜ್ಯ ಮಟ್ಟದಲ್ಲಿ "ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ" | ಮಾಹಿತಿ ಪಡೆಯುವ ಹಕ್ಕು ಕಾಯ್ದೆ 2005ರ ಸೆಕ್ಷನ್ 19(1) ರ ಪ್ರಕಾರ ರಾಜ್ಯ ಮಟ್ಟದಲ್ಲಿ "ಮೇಲ್ಮನವಿ ಪ್ರಾಧಿಕಾರಿ" |
|---|---|---|---|---|
| **ಜಿಲ್ಲಾ ಮಟ್ಟದಲ್ಲಿ** | | | | |
| 1 | ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಸ್ ರವರ ಕಛೇರಿ, ರಾಮನಗರ ಜಿಲ್ಲೆ | ಅಬ್ಕಾರಿ ಉಪ ಅಧೀಕ್ಷಕರು, ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಸ್‌ರವರ ಕಛೇರಿ | ಅಬ್ಕಾರಿ ನಿರ್ರೀಕ್ಷಕರು, ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಸ್‌ರವರ ಕಛೇರಿ | ಕಮೀಷನರ್ ಆಫ್ ಎಕ್ಸೈಸ್, ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಸ್‌ರವರ ಕಛೇರಿ |
| **ಉಪ ವಿಭಾಗ ಮಟ್ಟದಲ್ಲಿ** | | | | |
| 2 | ಅಬ್ಕಾರಿ ಉಪ ಅಧೀಕ್ಷಕರ ಕಛೇರಿ | ಅಬ್ಕಾರಿ ನಿರೀಕ್ಷಕರು, ಅಬ್ಕಾರಿ ಉಪ ಅಧೀಕ್ಷಕರ ಕಛೇರಿ. | ಅಬ್ಕಾರಿ ಉಪ ನಿರೀಕ್ಷಕರು, ಅಬ್ಕಾರಿ ಉಪ ಅಧೀಕ್ಷಕರ ಕಛೇರಿ. | ಅಬ್ಕಾರಿ ಉಪ ಅಧೀಕ್ಷಕರು, ಅಬ್ಕಾರಿ ಉಪ ಅಧೀಕ್ಷಕರ ಕಛೇರಿ |
| **ತಾಲ್ಲೂಕು ಮಟ್ಟದಲ್ಲಿ** | | | | |
| 3 | ಅಬ್ಕಾರಿ ನಿರೀಕ್ಷಕರ ಕಛೇರಿ | ಅಬ್ಕಾರಿ ನಿರೀಕ್ಷಕರು, ಅಬ್ಕಾರಿ ನಿರೀಕ್ಷಕರ ಕಛೇರಿ | ಅಬ್ಕಾರಿ ಉಪ ನಿರೀಕ್ಷಕರು, ಅಬ್ಕಾರಿ ನಿರೀಕ್ಷಕರ ಕಛೇರಿ | ಅಬ್ಕಾರಿ ಉಪ ಅಧೀಕ್ಷಕರು, ಅಬ್ಕಾರಿ ಉಪ ಅಧೀಕ್ಷಕರ ಕಛೇರಿ |
| **ಡಿಸ್ಟಿಲರಿ/ಬ್ರವರಿ/ವೈನರಿ** | | | | |
| 4 | ಅಬ್ಕಾರಿ ಅಧೀಕ್ಷಕರ ಕಛೇರಿ, | ಅಬ್ಕಾರಿ ಅಧೀಕ್ಷಕರು | ಅಬ್ಕಾರಿ ನಿರೀಕ್ಷಕರು, | ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಸ್, |

**XVII. ನಿಯಮಿಸಬಹುದಾದಂತಹ ಇತರ ಮಾಹಿತಿಯನ್ನು ಪ್ರಕಟಿಸತಕ್ಕದ್ದು ಮತ್ತು ಆ ತರುವಾಯ ಪ್ರತಿವರ್ಷ ಈ ಪ್ರಕಟಣೆಗಳನ್ನು ಅಂದಿನವರೆಗೆ ಪರಿಷ್ಕರಿಸತಕ್ಕದ್ದು:**

ನಿಯಮಾನುಸಾರ ಮಾಹಿತಿ ಪ್ರಕಟಿಸಲಾಗುವುದು.

**ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಸ್,**
**ರಾಮನಗರ ಜಿಲ್ಲೆ, ರಾಮನಗರ.**

**ಪಿ.ಆರ್. 601**

## ಕರ್ನಾಟಕ ರಾಜ್ಯ ಚುನಾವಣಾ ಆಯೋಗದ ನಡವಳಿಗಳು

ವಿಷಯ : **ಯಶೋಧಾಬಾಯಿ ನಾರಾಯಣ ತರಸೆ** ರವರು **ವಿಜಾಪೂರ ಜಿಲ್ಲೆ, ವಿಜಾಪೂರ ತಾಲ್ಲೂಕು ಪಂಚಾಯತಿ** ಸಾರ್ವತ್ರಿಕ ಚುನಾವಣೆ–2010 ರಲ್ಲಿ **ವಿಜಾಪೂರ ತಾಲ್ಲೂಕು ಪಂಚಾಯತಿ, 02–ಅಲಿಯಾಬಾದ** ಚುನಾವಣಾ ಕ್ಷೇತ್ರದಿಂದ ಸ್ಪರ್ಧಿಸಿ ಚುನಾವಣಾ ವೆಚ್ಚದ ಲೆಕ್ಕ ವಿವರಗಳನ್ನು ಸಲ್ಲಿಸದಿರುವುದರಿಂದ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಪ್ರಕರಣ 308–ಸಿ ಪ್ರಕಾರ ಅನರ್ಹಗೊಳಿಸುವ ಬಗ್ಗೆ.

ಉಲ್ಲೇಖ: 1) ಜಿಲ್ಲಾಧಿಕಾರಿಗಳು, **ವಿಜಾಪೂರ** ಜಿಲ್ಲೆ ರವರ ಪತ್ರದ ಸಂಖ್ಯೆ: **ಚುನಾವಣೆ.ಸಿಆರ್.60/2010–11** ದಿನಾಂಕ: **16–08–2011**

2) ಆಯೋಗದ ನೋಟೀಸು ಸಂಖ್ಯೆ: ರಾಚುಆ/212/ಟಿಜಡ್‌ಪಿ/2011, ದಿನಾಂಕ: **29–08–2011**

3) ಜಿಲ್ಲಾಧಿಕಾರಿಗಳು, **ವಿಜಾಪೂರ** ಜಿಲ್ಲೆ, ರವರ ಪತ್ರ ಸಂಖ್ಯೆ: **ಟಿಜೆಡ್‌ಪಿ/ಚುನಾವಣ/.ಸಿಆರ್/60/2010–11** ದಿನಾಂಕ: **22–11–2011**

**ಪ್ರಸ್ತಾವನೆ:**

**ವಿಜಾಪೂರ ಜಿಲ್ಲೆ, ವಿಜಾಪೂರ ತಾಲ್ಲೂಕು ಪಂಚಾಯತಿ** ಸದಸ್ಯ ಸ್ಥಾನಕ್ಕೆ **02–ಅಲಿಯಾಬಾದ** ತಾಲ್ಲೂಕು ಪಂಚಾಯತಿ ಚುನಾವಣಾ ಕ್ಷೇತ್ರದಿಂದ ಸಾರ್ವತ್ರಿಕ ಚುನಾವಣೆ 2010ರಲ್ಲಿ ಸ್ಪರ್ಧಿಸಿದ್ದ (ಪ್ರಪತ್ರ–10 ರಂತೆ) **ಯಶೋಧಾಬಾಯಿ ನಾರಾಯಣ ತರಸೆ** ರವರು ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಪ್ರಕರಣ 308– ಬಿ ಹಾಗೂ ಕರ್ನಾಟಕ ಪಂಚಾಯತ್ ರಾಜ್ (ಚುನಾವಣೆಗೆ ಸ್ಪರ್ಧಿಸುವ ಅಭ್ಯರ್ಥಿಗಳ ವೆಚ್ಚ ಮಿತಿ) ನಿಯಮಗಳು 2005ರ ನಿಯಮ 2 ಮತ್ತು ಕರ್ನಾಟಕ ಪಂಚಾಯತ್ ರಾಜ್ (ಜಿಲ್ಲಾ ಮತ್ತು ತಾಲ್ಲೂಕು ಪಂಚಾಯತಿ ಚುನಾವಣೆಗಳಲ್ಲಿ ಸ್ಪರ್ಧಿಸುವ ಅಭ್ಯರ್ಥಿಗಳ ವೆಚ್ಚ ಮಿತಿ) ಆದೇಶ 2005ರ ಖಂಡ 3 ರ ಪ್ರಕಾರ, ಚುನಾವಣಾ ವೆಚ್ಚಗಳ ಲೆಕ್ಕ ಪತ್ರವನ್ನು ನಿಗದಿತ ನಮೂನೆಯಲ್ಲಿ ಚುನಾವಣಾ ಫಲಿತಾಂಶ ಘೋಷಿತವಾದ 30 ದಿನಗಳೊಳಗೆ ಸಲ್ಲಿಸಿರುವುದಿಲ್ಲವೆಂದು **ವಿಜಾಪೂರ** ಜಿಲ್ಲೆಯ ಜಿಲ್ಲಾಧಿಕಾರಿಗಳು ಉಲ್ಲೇಖ(1) ರ ಪತ್ರದಲ್ಲಿ ವರದಿ ಮಾಡಿರುತ್ತಾರೆ.

ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಪ್ರಕರಣ 308–ಸಿ ಹಾಗೂ ಕರ್ನಾಟಕ ಪಂಚಾಯತ್ ರಾಜ್ (ಜಿಲ್ಲಾ ಮತ್ತು ತಾಲ್ಲೂಕು ಪಂಚಾಯತಿ ಚುನಾವಣೆಗಳಲ್ಲಿ ಸ್ಪರ್ಧಿಸುವ ಅಭ್ಯರ್ಥಿಗಳ ವೆಚ್ಚ ಮಿತಿ) ಆದೇಶ 2005ರ ಖಂಡ 6 ರ ಉಪಖಂಡ 5ರನ್ವಯ ಆಯೋಗದಿಂದ ಉಲ್ಲೇಖ(2)ರ ದಿನಾಂಕ: **29–08–2011** ರ ನೋಟೀಸನ್ನು ನೀಡಿ ಅವರನ್ನು ಏಕೆ ಅನರ್ಹಗೊಳಿಸಬಾರದು ಎಂಬುದಕ್ಕೆ ನೋಟೀಸು ತಲುಪಿದ 15 ದಿನಗಳೊಳಗಾಗಿ ರಾಜ್ಯ ಚುನಾವಣಾ ಆಯೋಗಕ್ಕೆ ಕಾರಣಗಳನ್ನು ಸಲ್ಲಿಸತಕ್ಕದೆಂದು ತಿಳಿಸಲಾಗಿತ್ತು.

ಮೇಲ್ಕಂಡ ನೋಟೀಸನ್ನು ದಿನಾಂಕ: **19–09–2011** ರಂದು **ಯಶೋಧಾಬಾಯಿ ನಾರಾಯಣ ತರಸೆ** ರವರಿಗೆ **ಗ್ರಾಮಲೆಕ್ಕಿಗರು ಜಾರಿ ಮಾಡಿದ್ದು,** ಜಿಲ್ಲಾಧಿಕಾರಿಗಳು ಜಾರಿಯಾದ ಪ್ರತಿಯನ್ನು ಆಯೋಗಕ್ಕೆ ಕಳುಹಿಸಿರುತ್ತಾರೆ. ಆದಾಗ್ಯೂ ಅಭ್ಯರ್ಥಿಯು ಆಯೋಗಕ್ಕೆ ಉತ್ತರವನ್ನು ನೀಡಿರುವುದಿಲ್ಲ. ಹಾಗೂ ಜಿಲ್ಲಾಧಿಕಾರಿಗಳು ಈ ವಿಷಯದಲ್ಲಿ ಪರಿಶೀಲಿಸಿ ಅಂತಿಮವಾಗಿ ಉಲ್ಲೇಖ(3) ರ ವರದಿಯಲ್ಲಿಯೂ ಸಹ ಸದರಿ ಅಭ್ಯರ್ಥಿಯು ಚುನಾವಣಾ ವೆಚ್ಚದ ಲೆಕ್ಕ ವಿವರಗಳನ್ನು ಸಲ್ಲಿಸಿರುವುದಿಲ್ಲವೆಂದು ತಿಳಿಸಿ ನಿಯಮಾನುಸಾರ ಸದರಿಯವರನ್ನು ಅನರ್ಹಗೊಳಿಸಬಹುದೆಂದು ಶಿಫಾರಸ್ಸು ಮಾಡಿರುತ್ತಾರೆ.

ಮೇಲ್ಕಂಡ ಅಂಶಗಳ ಹಿನ್ನಲೆಯಲ್ಲಿ ಈ ಪ್ರಕರಣಕ್ಕೆ ಸಂಬಂಧಿಸಿದ ದಾಖಲೆಗಳನ್ನು ಪರಿಶೀಲಿಸಲಾಗಿ **ಯಶೋಧಾಬಾಯಿ ನಾರಾಯಣ ತರಸೆ** ರವರು ಚುನಾವಣಾ ವೆಚ್ಚದ ಲೆಕ್ಕ ಪತ್ರಗಳನ್ನು ಸಲ್ಲಿಸುವಲ್ಲಿ ವಿಫಲರಾಗಿದ್ದು, ಜಾರಿಯಾದ ನೋಟೀಸಿಗೆ ಸರಿಯಾದ ಕಾರಣ ಅಥವಾ ಸಮರ್ಥನೆಗಳನ್ನು ಒದಗಿಸಿಲ್ಲದಿರುವುದು ದೃಢಪಟ್ಟಿರುತ್ತದೆ. ಕಾರಣ ಈ ಕೆಳಕಂಡಂತೆ ಆದೇಶ.

**ಆದೇಶ ಸಂಖ್ಯೆ: ರಾಚುಆ/212(1)/ಟಿಜಡ್‌ಪಿ/2011, ಬೆಂಗಳೂರು ದಿನಾಂಕ: 22–03–2012**

ಮೇಲೆ ವಿವರಿಸಿರುವಂತೆ ಜಿಲ್ಲಾಧಿಕಾರಿಗಳ ವರದಿಯನ್ನು ಪರಿಶೀಲಿಸಿ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಪ್ರಕರಣ 306 ರ ಪ್ರಕಾರ ನೋಟೀಸನ್ನು ಜಾರಿಮಾಡಿದಾಗ್ಯೂ **ವಿಜಾಪೂರ ಜಿಲ್ಲೆ ವಿಜಾಪೂರ ತಾಲ್ಲೂಕು ಪಂಚಾಯತಿ** ಸದಸ್ಯ ಸ್ಥಾನಕ್ಕೆ **02–ಅಲಿಯಾಬಾದ ತಾಲ್ಲೂಕು ಪಂಚಾಯತಿ** ಚುನಾವಣಾ ಕ್ಷೇತ್ರದಿಂದ ಸಾರ್ವತ್ರಿಕ ಚುನಾವಣೆ 2010ರಲ್ಲಿ ಸ್ಪರ್ಧಿಸಿದ್ದ **ಯಶೋಧಾಬಾಯಿ ನಾರಾಯಣ ತರಸೆ** ಇವರು ಆಯೋಗಕ್ಕೆ ವೆಚ್ಚದ ವಿವರಗಳನ್ನು ನೀಡುವಲ್ಲಿ ವಿಫಲರಾಗಿರುತ್ತಾರೆ ಹಾಗೂ ಚುನಾವಣಾ ವೆಚ್ಚದ ಲೆಕ್ಕ ಪತ್ರಗಳನ್ನು ಸಲ್ಲಿಸದೇ ಇರುವುದಕ್ಕೆ ಸರಿಯಾದ ಕಾರಣ ಅಥವಾ ಸಮರ್ಥನೆ ನೀಡಿಲ್ಲದಿರುವುದು ದೃಢಪಟ್ಟಿರುವುದರಿಂದ ರಾಜ್ಯ ಚುನಾವಣಾ ಆಯೋಗವು **ಯಶೋಧಾಬಾಯಿ ನಾರಾಯಣ ತರಸೆ** ರವರನ್ನು ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಪ್ರಕರಣ 308–ಸಿ ಅನುಸಾರ ಈ ಆದೇಶದ ದಿನಾಂಕದಿಂದ ಆರು ವರ್ಷಗಳ ಅವಧಿಗೆ ಅನರ್ಹರೆಂದು ಘೋಷಿಸಿರುತ್ತದೆ.

**ಆಯುಕ್ತರು,**
**ರಾಜ್ಯ ಚುನಾವಣಾ ಆಯೋಗ.**

## ಕರ್ನಾಟಕ ರಾಜ್ಯ ಚುನಾವಣಾ ಆಯೋಗದ ನಡವಳಿಗಳು

ವಿಷಯ : **ಕಸ್ತೂರಿಬಾಯಿ ಪಾಂಡು ಜಾಧವ** ರವರು **ವಿಜಾಪೂರ ಜಿಲ್ಲೆ, ವಿಜಾಪೂರ ತಾಲ್ಲೂಕು ಪಂಚಾಯತಿ** ಸಾರ್ವತ್ರಿಕ ಚುನಾವಣೆ–2010 ರಲ್ಲಿ **ವಿಜಾಪೂರ ತಾಲ್ಲೂಕು ಪಂಚಾಯತಿ, 04–ಅರಕೇರಿ** ಚುನಾವಣಾ ಕ್ಷೇತ್ರದಿಂದ ಸ್ಪರ್ಧಿಸಿ ಚುನಾವಣಾ ವೆಚ್ಚದ ಲೆಕ್ಕ ವಿವರಗಳನ್ನು ಸಲ್ಲಿಸದಿರುವುದರಿಂದ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಪ್ರಕರಣ 308–ಸಿ ಪ್ರಕಾರ ಅನರ್ಹಗೊಳಿಸುವ ಬಗ್ಗೆ.

ಉಲ್ಲೇಖ : 1) ಜಿಲ್ಲಾಧಿಕಾರಿಗಳು, **ವಿಜಾಪೂರ** ಜಿಲ್ಲೆ ರವರ ಪತ್ರದ ಸಂಖ್ಯೆ: **ಚುನಾವಣೆ.ಸಿಆರ್.60/2010–11** ದಿನಾಂಕ: **16–08–2011**

2) ಆಯೋಗದ ನೋಟೀಸು ಸಂಖ್ಯೆ: ರಾಚುಆ/212/ಟಿಜಡ್‌ಪಿ/2011, ದಿನಾಂಕ: **29–08–2011**

3) ಜಿಲ್ಲಾಧಿಕಾರಿಗಳು, **ವಿಜಾಪೂರ** ಜಿಲ್ಲೆ, ರವರ ಪತ್ರ ಸಂಖ್ಯೆ: **ಟಿಜೆಡ್‌ಪಿ/ಚುನಾವಣ/.ಸಿಆರ್/60/2010–11** ದಿನಾಂಕ: **22–11–2011**

**ಪ್ರಸ್ತಾವನೆ:**

**ವಿಜಾಪೂರ ಜಿಲ್ಲೆ, ವಿಜಾಪೂರ ತಾಲ್ಲೂಕು ಪಂಚಾಯತಿ** ಸದಸ್ಯ ಸ್ಥಾನಕ್ಕೆ **04–ಅರಕೇರಿ** ತಾಲ್ಲೂಕು ಪಂಚಾಯತಿ ಚುನಾವಣಾ ಕ್ಷೇತ್ರದಿಂದ ಸಾರ್ವತ್ರಿಕ ಚುನಾವಣೆ 2010ರಲ್ಲಿ ಸ್ಪರ್ಧಿಸಿದ್ದ (ಪ್ರಪತ್ರ–10 ರಂತೆ) **ಕಸ್ತೂರಿಬಾಯಿ ಪಾಂಡು ಜಾಧವ** ರವರು ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಪ್ರಕರಣ 308– ಬಿ ಹಾಗೂ ಕರ್ನಾಟಕ ಪಂಚಾಯತ್ ರಾಜ್ (ಚುನಾವಣೆಗೆ ಸ್ಪರ್ಧಿಸುವ ಅಭ್ಯರ್ಥಿಗಳ ವೆಚ್ಚ ಮಿತಿ) ನಿಯಮಗಳು 2005ರ ನಿಯಮ 2 ಮತ್ತು ಕರ್ನಾಟಕ ಪಂಚಾಯತ್ ರಾಜ್ (ಜಿಲ್ಲಾ ಮತ್ತು ತಾಲ್ಲೂಕು ಪಂಚಾಯತಿ ಚುನಾವಣೆಗಳಲ್ಲಿ ಸ್ಪರ್ಧಿಸುವ ಅಭ್ಯರ್ಥಿಗಳ ವೆಚ್ಚ ಮಿತಿ) ಆದೇಶ 2005ರ ಖಂಡ 3 ರ ಪ್ರಕಾರ, ಚುನಾವಣಾ ವೆಚ್ಚಗಳ ಲೆಕ್ಕ ಪತ್ರವನ್ನು ನಿಗದಿತ ನಮೂನೆಯಲ್ಲಿ ಚುನಾವಣಾ ಫಲಿತಾಂಶ ಘೋಷಿತವಾದ 30 ದಿನಗಳೊಳಗೆ ಸಲ್ಲಿಸಿರುವುದಿಲ್ಲವೆಂದು **ವಿಜಾಪೂರ** ಜಿಲ್ಲೆಯ ಜಿಲ್ಲಾಧಿಕಾರಿಗಳು ಉಲ್ಲೇಖ(1) ರ ಪತ್ರದಲ್ಲಿ ವರದಿ ಮಾಡಿರುತ್ತಾರೆ.

ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಪ್ರಕರಣ 308–ಸಿ ಹಾಗೂ ಕರ್ನಾಟಕ ಪಂಚಾಯತ್ ರಾಜ್ (ಜಿಲ್ಲಾ ಮತ್ತು ತಾಲ್ಲೂಕು ಪಂಚಾಯತಿ ಚುನಾವಣೆಗಳಲ್ಲಿ ಸ್ಪರ್ಧಿಸುವ ಅಭ್ಯರ್ಥಿಗಳ ವೆಚ್ಚ ಮಿತಿ) ಆದೇಶ 2005ರ ಖಂಡ 6 ರ ಉಪಖಂಡ 5ರನ್ವಯ ಆಯೋಗದಿಂದ ಉಲ್ಲೇಖ(2)ರ ದಿನಾಂಕ: **29–08–2011** ರ ನೋಟೀಸನ್ನು ನೀಡಿ ಅವರನ್ನು ಏಕೆ ಅನರ್ಹಗೊಳಿಸಬಾರದು ಎಂಬುದಕ್ಕೆ ನೋಟೀಸು ತಲುಪಿದ 15 ದಿನಗಳೊಳಗಾಗಿ ರಾಜ್ಯ ಚುನಾವಣಾ ಆಯೋಗಕ್ಕೆ ಕಾರಣಗಳನ್ನು ಸಲ್ಲಿಸತಕ್ಕದೆಂದು ತಿಳಿಸಲಾಗಿತ್ತು.

ಮೇಲ್ಕಂಡ ನೋಟೀಸನ್ನು ದಿನಾಂಕ: **24–09–2011** ರಂದು **ಕಸ್ತೂರಿಬಾಯಿ ಪಾಂಡು ಜಾಧವ** ರವರಿಗೆ **ಗ್ರಾಮಲೆಕ್ಕಿಗರು ಜಾರಿ ಮಾಡಿದ್ದು,** ಜಿಲ್ಲಾಧಿಕಾರಿಗಳು ಜಾರಿಯಾದ ಪ್ರತಿಯನ್ನು ಆಯೋಗಕ್ಕೆ ಕಳುಹಿಸಿರುತ್ತಾರೆ. ಆದಾಗ್ಯೂ ಅಭ್ಯರ್ಥಿಯು ಆಯೋಗಕ್ಕೆ ಉತ್ತರವನ್ನು ನೀಡಿರುವುದಿಲ್ಲ. ಹಾಗೂ ಜಿಲ್ಲಾಧಿಕಾರಿಗಳು ಈ ವಿಷಯದಲ್ಲಿ ಪರಿಶೀಲಿಸಿ ಅಂತಿಮವಾಗಿ ಉಲ್ಲೇಖ(3) ರ ವರದಿಯಲ್ಲಿಯೂ ಸಹ ಸದರಿ ಅಭ್ಯರ್ಥಿಯು ಚುನಾವಣಾ ವೆಚ್ಚದ ಲೆಕ್ಕ ವಿವರಗಳನ್ನು ಸಲ್ಲಿಸಿರುವುದಿಲ್ಲವೆಂದು ತಿಳಿಸಿ ನಿಯಮಾನುಸಾರ ಸದರಿಯವರನ್ನು ಅನರ್ಹಗೊಳಿಸಬಹುದೆಂದು ಶಿಫಾರಸ್ಸು ಮಾಡಿರುತ್ತಾರೆ.

ಮೇಲ್ಕಂಡ ಅಂಶಗಳ ಹಿನ್ನಲೆಯಲ್ಲಿ ಈ ಪ್ರಕರಣಕ್ಕೆ ಸಂಬಂಧಿಸಿದ ದಾಖಲೆಗಳನ್ನು ಪರಿಶೀಲಿಸಲಾಗಿ **ಕಸ್ತೂರಿಬಾಯಿ ಪಾಂಡು ಜಾಧವ** ರವರು ಚುನಾವಣಾ ವೆಚ್ಚದ ಲೆಕ್ಕ ಪತ್ರಗಳನ್ನು ಸಲ್ಲಿಸುವಲ್ಲಿ ವಿಫಲರಾಗಿದ್ದು, ಜಾರಿಯಾದ ನೋಟೀಸಿಗೆ ಸರಿಯಾದ ಕಾರಣ ಅಥವಾ ಸಮರ್ಥನೆಗಳನ್ನು ಒದಗಿಸಿಲ್ಲದಿರುವುದು ದೃಢಪಟ್ಟಿರುತ್ತದೆ. ಕಾರಣ ಈ ಕೆಳಕಂಡಂತೆ ಆದೇಶ.

**ಆದೇಶ ಸಂಖ್ಯೆ: ರಾಚುಆ/212(2)/ಟಿಜಡ್‌ಪಿ/2011, ಬೆಂಗಳೂರು ದಿನಾಂಕ: 22–03–2012**

ಮೇಲೆ ವಿವರಿಸಿರುವಂತೆ ಜಿಲ್ಲಾಧಿಕಾರಿಗಳ ವರದಿಯನ್ನು ಪರಿಶೀಲಿಸಿ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಪ್ರಕರಣ 306 ರ ಪ್ರಕಾರ ನೋಟೀಸನ್ನು ಜಾರಿಮಾಡಿದಾಗ್ಯೂ **ವಿಜಾಪೂರ ಜಿಲ್ಲೆ ವಿಜಾಪೂರ ತಾಲ್ಲೂಕು ಪಂಚಾಯತಿ** ಸದಸ್ಯ ಸ್ಥಾನಕ್ಕೆ **04–ಅರಕೇರಿ ತಾಲ್ಲೂಕು ಪಂಚಾಯತಿ** ಚುನಾವಣಾ ಕ್ಷೇತ್ರದಿಂದ ಸಾರ್ವತ್ರಿಕ ಚುನಾವಣೆ 2010ರಲ್ಲಿ ಸ್ಪರ್ಧಿಸಿದ್ದ **ಕಸ್ತೂರಿಬಾಯಿ ಪಾಂಡು ಜಾಧವ** ಇವರು ಆಯೋಗಕ್ಕೆ ವೆಚ್ಚದ ವಿವರಗಳನ್ನು ನೀಡುವಲ್ಲಿ ವಿಫಲರಾಗಿರುತ್ತಾರೆ ಹಾಗೂ ಚುನಾವಣಾ ವೆಚ್ಚದ ಲೆಕ್ಕ ಪತ್ರಗಳನ್ನು ಸಲ್ಲಿಸದೇ ಇರುವುದಕ್ಕೆ ಸರಿಯಾದ ಕಾರಣ ಅಥವಾ ಸಮರ್ಥನೆ ನೀಡಿಲ್ಲದಿರುವುದು ದೃಢಪಟ್ಟಿರುವುದರಿಂದ ರಾಜ್ಯ ಚುನಾವಣಾ ಆಯೋಗವು **ಕಸ್ತೂರಿಬಾಯಿ ಪಾಂಡು ಜಾಧವ** ರವರನ್ನು ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಪ್ರಕರಣ 308–ಸಿ ಅನುಸಾರ ಈ ಆದೇಶದ ದಿನಾಂಕದಿಂದ ಆರು ವರ್ಷಗಳ ಅವಧಿಗೆ ಅನರ್ಹರೆಂದು ಘೋಷಿಸಿರುತ್ತದೆ.

**ಆಯುಕ್ತರು,**
**ರಾಜ್ಯ ಚುನಾವಣಾ ಆಯೋಗ.**

## ಕರ್ನಾಟಕ ರಾಜ್ಯ ಚುನಾವಣಾ ಆಯೋಗದ ನಡವಳಿಗಳು

ವಿಷಯ : **ಹೊನವಾಡ ವಿದ್ಯಾಶ್ರೀ ಯಲ್ಲಾಲಿಂಗ** ರವರು **ವಿಜಾಪೂರ ಜಿಲ್ಲೆ, ವಿಜಾಪೂರ ತಾಲ್ಲೂಕು ಪಂಚಾಯತಿ** ಸಾರ್ವತ್ರಿಕ ಚುನಾವಣೆ–2010 ರಲ್ಲಿ **ವಿಜಾಪೂರ ತಾಲ್ಲೂಕು ಪಂಚಾಯತಿ, 07–ಬಿಜ್ಜರಗಿ** ಚುನಾವಣಾ ಕ್ಷೇತ್ರದಿಂದ ಸ್ಪರ್ಧಿಸಿ ಚುನಾವಣಾ ವೆಚ್ಚದ ಲೆಕ್ಕ ವಿವರಗಳನ್ನು ಸಲ್ಲಿಸದಿರುವುದರಿಂದ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಪ್ರಕರಣ 308–ಸಿ ಪ್ರಕಾರ ಅನರ್ಹಗೊಳಿಸುವ ಬಗ್ಗೆ.

ಉಲ್ಲೇಖ : 1) ಜಿಲ್ಲಾಧಿಕಾರಿಗಳು, **ವಿಜಾಪೂರ** ಜಿಲ್ಲೆ ರವರ ಪತ್ರದ ಸಂಖ್ಯೆ: **ಚುನಾವಣೆ.ಸಿಆರ್.60/2010–11** ದಿನಾಂಕ: **16–08–2011**

2) ಆಯೋಗದ ನೋಟೀಸು ಸಂಖ್ಯೆ: ರಾಚುಆ/212/ಟಿಜಡ್‌ಪಿ/2011, ದಿನಾಂಕ: **29–08–2011**

3) ಜಿಲ್ಲಾಧಿಕಾರಿಗಳು, **ವಿಜಾಪೂರ** ಜಿಲ್ಲೆ, ರವರ ಪತ್ರ ಸಂಖ್ಯೆ: **ಟಿಜೆಡ್‌ಪಿ/ಚುನಾವಣ/.ಸಿಆರ್/60/2010–11** ದಿನಾಂಕ: **22–11–2011**

**ಪ್ರಸ್ತಾವನೆ:**

**ವಿಜಾಪೂರ ಜಿಲ್ಲೆ, ವಿಜಾಪೂರ ತಾಲ್ಲೂಕು ಪಂಚಾಯತಿ** ಸದಸ್ಯ ಸ್ಥಾನಕ್ಕೆ **07–ಬಿಜ್ಜರಗಿ** ತಾಲ್ಲೂಕು ಪಂಚಾಯತಿ ಚುನಾವಣಾ ಕ್ಷೇತ್ರದಿಂದ ಸಾರ್ವತ್ರಿಕ ಚುನಾವಣೆ 2010ರಲ್ಲಿ ಸ್ಪರ್ಧಿಸಿದ್ದ (ಪ್ರಪತ್ರ–10 ರಂತೆ) **ಹೊನವಾಡ ವಿದ್ಯಾಶ್ರೀ ಯಲ್ಲಾಲಿಂಗ** ರವರು ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಪ್ರಕರಣ 308– ಬಿ ಹಾಗೂ ಕರ್ನಾಟಕ ಪಂಚಾಯತ್ ರಾಜ್ (ಚುನಾವಣೆಗೆ ಸ್ಪರ್ಧಿಸುವ ಅಭ್ಯರ್ಥಿಗಳ ವೆಚ್ಚ ಮಿತಿ) ನಿಯಮಗಳು 2005ರ ನಿಯಮ 2 ಮತ್ತು ಕರ್ನಾಟಕ ಪಂಚಾಯತ್ ರಾಜ್ (ಜಿಲ್ಲಾ ಮತ್ತು ತಾಲ್ಲೂಕು ಪಂಚಾಯತಿ ಚುನಾವಣೆಗಳಲ್ಲಿ ಸ್ಪರ್ಧಿಸುವ ಅಭ್ಯರ್ಥಿಗಳ ವೆಚ್ಚ ಮಿತಿ) ಆದೇಶ 2005ರ ಖಂಡ 3 ರ ಪ್ರಕಾರ, ಚುನಾವಣಾ ವೆಚ್ಚಗಳ ಲೆಕ್ಕ ಪತ್ರವನ್ನು ನಿಗದಿತ ನಮೂನೆಯಲ್ಲಿ ಚುನಾವಣಾ ಫಲಿತಾಂಶ ಘೋಷಿತವಾದ 30 ದಿನಗಳೊಳಗೆ ಸಲ್ಲಿಸಿರುವುದಿಲ್ಲವೆಂದು **ವಿಜಾಪೂರ** ಜಿಲ್ಲೆಯ ಜಿಲ್ಲಾಧಿಕಾರಿಗಳು ಉಲ್ಲೇಖ(1) ರ ಪತ್ರದಲ್ಲಿ ವರದಿ ಮಾಡಿರುತ್ತಾರೆ.

ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಪ್ರಕರಣ 308–ಸಿ ಹಾಗೂ ಕರ್ನಾಟಕ ಪಂಚಾಯತ್ ರಾಜ್ (ಜಿಲ್ಲಾ ಮತ್ತು ತಾಲ್ಲೂಕು ಪಂಚಾಯತಿ ಚುನಾವಣೆಗಳಲ್ಲಿ ಸ್ಪರ್ಧಿಸುವ ಅಭ್ಯರ್ಥಿಗಳ ವೆಚ್ಚ ಮಿತಿ) ಆದೇಶ 2005ರ ಖಂಡ 6 ರ ಉಪಖಂಡ 5ರನ್ವಯ ಆಯೋಗದಿಂದ ಉಲ್ಲೇಖ(2)ರ ದಿನಾಂಕ: **29–08–2011** ರ ನೋಟೀಸನ್ನು ನೀಡಿ ಅವರನ್ನು ಏಕೆ ಅನರ್ಹಗೊಳಿಸಬಾರದು ಎಂಬುದಕ್ಕೆ ನೋಟೀಸು ತಲುಪಿದ 15 ದಿನಗಳೊಳಗಾಗಿ ರಾಜ್ಯ ಚುನಾವಣಾ ಆಯೋಗಕ್ಕೆ ಕಾರಣಗಳನ್ನು ಸಲ್ಲಿಸತಕ್ಕದೆಂದು ತಿಳಿಸಲಾಗಿತ್ತು.

ಮೇಲ್ಕಂಡ ನೋಟೀಸನ್ನು ದಿನಾಂಕ: **25–09–2011** ರಂದು **ಹೊನವಾಡ ವಿದ್ಯಾಶ್ರೀ ಯಲ್ಲಾಲಿಂಗ** ರವರಿಗೆ **ಗ್ರಾಮಲೆಕ್ಕಿಗರು ಜಾರಿ ಮಾಡಿದ್ದು,** ಜಿಲ್ಲಾಧಿಕಾರಿಗಳು ಜಾರಿಯಾದ ಪ್ರತಿಯನ್ನು ಆಯೋಗಕ್ಕೆ ಕಳುಹಿಸಿರುತ್ತಾರೆ. ಆದಾಗ್ಯೂ ಅಭ್ಯರ್ಥಿಯು ಆಯೋಗಕ್ಕೆ ಉತ್ತರವನ್ನು ನೀಡಿರುವುದಿಲ್ಲ. ಹಾಗೂ ಜಿಲ್ಲಾಧಿಕಾರಿಗಳು ಈ ವಿಷಯದಲ್ಲಿ ಪರಿಶೀಲಿಸಿ ಅಂತಿಮವಾಗಿ ಉಲ್ಲೇಖ(3) ರ ವರದಿಯಲ್ಲಿಯೂ ಸಹ ಸದರಿ ಅಭ್ಯರ್ಥಿಯು ಚುನಾವಣಾ ವೆಚ್ಚದ ಲೆಕ್ಕ ವಿವರಗಳನ್ನು ಸಲ್ಲಿಸಿರುವುದಿಲ್ಲವೆಂದು ತಿಳಿಸಿ ನಿಯಮಾನುಸಾರ ಸದರಿಯವರನ್ನು ಅನರ್ಹಗೊಳಿಸಬಹುದೆಂದು ಶಿಫಾರಸ್ಸು ಮಾಡಿರುತ್ತಾರೆ.

ಮೇಲ್ಕಂಡ ಅಂಶಗಳ ಹಿನ್ನಲೆಯಲ್ಲಿ ಈ ಪ್ರಕರಣಕ್ಕೆ ಸಂಬಂಧಿಸಿದ ದಾಖಲೆಗಳನ್ನು ಪರಿಶೀಲಿಸಲಾಗಿ **ಹೊನವಾಡ ವಿದ್ಯಾಶ್ರೀ ಯಲ್ಲಾಲಿಂಗ** ರವರು ಚುನಾವಣಾ ವೆಚ್ಚದ ಲೆಕ್ಕ ಪತ್ರಗಳನ್ನು ಸಲ್ಲಿಸುವಲ್ಲಿ ವಿಫಲರಾಗಿದ್ದು, ಜಾರಿಯಾದ ನೋಟೀಸಿಗೆ ಸರಿಯಾದ ಕಾರಣ ಅಥವಾ ಸಮರ್ಥನೆಗಳನ್ನು ಒದಗಿಸಿಲ್ಲದಿರುವುದು ದೃಢಪಟ್ಟಿರುತ್ತದೆ. ಕಾರಣ ಈ ಕೆಳಕಂಡಂತೆ ಆದೇಶ.

**ಆದೇಶ ಸಂಖ್ಯೆ: ರಾಚುಆ/212(3)/ಟಿಜಡ್‌ಪಿ/2011, ಬೆಂಗಳೂರು ದಿನಾಂಕ: 22–03–2012**

ಮೇಲೆ ವಿವರಿಸಿರುವಂತೆ ಜಿಲ್ಲಾಧಿಕಾರಿಗಳ ವರದಿಯನ್ನು ಪರಿಶೀಲಿಸಿ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಪ್ರಕರಣ 306 ರ ಪ್ರಕಾರ ನೋಟೀಸನ್ನು ಜಾರಿಮಾಡಿದಾಗ್ಯೂ **ವಿಜಾಪೂರ ಜಿಲ್ಲೆ ವಿಜಾಪೂರ ತಾಲ್ಲೂಕು ಪಂಚಾಯತಿ** ಸದಸ್ಯ ಸ್ಥಾನಕ್ಕೆ **07–ಬಿಜ್ಜರಗಿ ತಾಲ್ಲೂಕು ಪಂಚಾಯತಿ** ಚುನಾವಣಾ ಕ್ಷೇತ್ರದಿಂದ ಸಾರ್ವತ್ರಿಕ ಚುನಾವಣೆ 2010ರಲ್ಲಿ ಸ್ಪರ್ಧಿಸಿದ್ದ **ಹೊನವಾಡ ವಿದ್ಯಾಶ್ರೀ ಯಲ್ಲಾಲಿಂಗ** ಇವರು ಆಯೋಗಕ್ಕೆ ವೆಚ್ಚದ ವಿವರಗಳನ್ನು ನೀಡುವಲ್ಲಿ ವಿಫಲರಾಗಿರುತ್ತಾರೆ ಹಾಗೂ ಚುನಾವಣಾ ವೆಚ್ಚದ ಲೆಕ್ಕ ಪತ್ರಗಳನ್ನು ಸಲ್ಲಿಸದೇ ಇರುವುದಕ್ಕೆ ಸರಿಯಾದ ಕಾರಣ ಅಥವಾ ಸಮರ್ಥನೆ ನೀಡಿಲ್ಲದಿರುವುದು ದೃಢಪಟ್ಟಿರುವುದರಿಂದ ರಾಜ್ಯ ಚುನಾವಣಾ ಆಯೋಗವು **ಹೊನವಾಡ ವಿದ್ಯಾಶ್ರೀ ಯಲ್ಲಾಲಿಂಗ** ರವರನ್ನು ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಪ್ರಕರಣ 308–ಸಿ ಅನುಸಾರ ಈ ಆದೇಶದ ದಿನಾಂಕದಿಂದ ಆರು ವರ್ಷಗಳ ಅವಧಿಗೆ ಅನರ್ಹರೆಂದು ಘೋಷಿಸಿರುತ್ತದೆ.

**ಆಯುಕ್ತರು,**
**ರಾಜ್ಯ ಚುನಾವಣಾ ಆಯೋಗ.**

## ಷೆಡ್ಯೂಲ್ ಆಸ್ತಿ ವಿವರಗಳು

**1. Schedule No. 1 property belongs to 1st respondent Society :-**

All the piece and parcel of the property bearing Sy, No. 360/1, measuring situated at Hunasanahalli Village, Kodihalli Hobli, Kanakpura Taluk, Ramanagara District and Bounded on.

| | |
|---|---|
| East by: | House Property belongs to Siddabasappa |
| West by : | Property belongs to Rajaya |
| North by : | S.C. Colony Houses |
| South by : | Grama Panchayathi office & vacant site of Biladale basappa's sons property and Government Road |

**2. Schedule No. 2 property belongs to 2nd respondent (H.S. Raghu) :-**

All the piece and parcel of the agricultural land property bearing No. Sy No. 157, measuring 4 Acres 29 Guntas, Sy No. 159 measuring 4 Acres 38 Guntas, Sy No. 161 measuring 5 Acres, Sy No. 162 measuring 4 Acres 36 Guntas in total 19 Acres 23 Guntas, situated at Tattekere Village, Kodihalli Hobli, Kanakpura Taluk, Ramanagara District and Bounded on.

| | |
|---|---|
| East by: | Hunasahalli Gadi & Haluche Gowda's Properties |
| West by : | Government Forest Land |
| North by : | Government Forest Land |
| South by : | Property belongs to Doddachanne Gowda's relative properties |

**3. Schedule No. 3 property belongs to 2nd respondent (H.S. Raghu) :-**

All the piece and parcel of the agricultural land property bearing Sy No. 121/1 measuring 1 Acres, situated at Tattekere Village, Kodihalli Hobli, Kanakpura Taluk, Ramanagara District and Bounded on.

| | |
|---|---|
| East by: | Property Sy No. 117 & 118 |
| West by : | Government Road |
| North by : | Patelara Doddi & Madappa and Muslims Lands |
| South by : | Property belongs to Kenche Gowda |

**4. Schedule No. 4 property belongs to 5th respondent (Kalase Gowda) :-**

All the piece and parcel of the agricultural land property bearing Sy. No. 209/1, measuring 2 Acres 28.04 Guntas, situated at Bannimukkodulu Village, Kodihalli Hobli, Kanakpura Taluk, Ramanagara District and Bounded on.

| | |
|---|---|
| East by: | Property belongs to Thipare Gowda |
| West by : | Property belongs to Deve Gowda |
| North by : | Government Road |
| South by : | Property belongs to Sidde Gowda |

**5. Schedule No. 5 property belongs to 4th respondent (K.M. Nanjundaiah) :-**

All the piece and parcel of the agricultural land property bearing Sy No. 223/2A, measuring 1 Acre, situated at Kanchanahalli Village, Sathanur Hobli, Kanakpura Taluk, Ramanagara District and Bounded on. (So for as 4th respondent share is concerned).

| | |
|---|---|
| East by: | Property belongs to Linge Gowda |
| West by : | Property belongs to Basave Gowda |
| North by : | Property belongs to Gagare Gowda |
| South by : | Property belongs to Kividaiah |

**6. Schedule No. 6 property belongs to 3rd respondent (H. Krishna) :-**

All the piece and parcel of the property agricultural land property bearing Sy No. 108/2, measuring 2 Acres, situated at Kerelalusandra Village, Kasaba Hobli, Kanakpura Taluk, Ramanagara District and Bounded on.

| | |
|---|---|
| East by: | Property belongs to Muniyappa (Babu) |
| West by : | Property belongs to H. Krishna |
| North by : | Property belongs to Puttalakshamma |
| South by : | Government Road |

ಈ ಆದೇಶವನ್ನು ನನ್ನ ಸಹಿ ಹಾಗೂ ಕಛೇರಿ ಮೊಹರು ನಿಶೆಯೊಂದಿಗೆ ಈ ದಿನ ಅಂದರೆ ದಿನಾಂಕ 27–02–2012 ರಂದು ಹೊರಡಿಸಿರುತ್ತೇನೆ.

**ಸಿ.ಎಸ್. ವೀರೇಶ್,**

ಸಹಕಾರ ಸಂಘಗಳ ಜಂಟಿ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು

**ಪಿ.ಆರ್. 386**

## ಶಿಕ್ಷಣ ಸಚಿವಾಲಯ

### ಅಧಿಸೂಚನೆ

### ಸಂಖ್ಯೆ : ಇಡಿ 09 ಡಿಪಿಐ 2012, ಬೆಂಗಳೂರು, ದಿನಾಂಕ : 23ನೇ ಏಪ್ರಿಲ್ 2012

**ವಿಷಯ :** ಸಾರ್ವಜನಿಕ ಶಿಕ್ಷಣ ಇಲಾಖೆಯ, ಗ್ರೂಪ್–'ಎ' ಶ್ರೇಣಿಯ ಹಿರಿಯ ಸಹಾಯಕ ನಿರ್ದೇಶಕರು (ಬೋಧಕೇತರ) ವೃಂದದ ಅಧಿಕಾರಿಗಳ ಅಂತಿಮ ಜೇಷ್ಠತಾ ಪಟ್ಟಿಯನ್ನು ದಿನಾಂಕ : 01/01/2012ರಲ್ಲಿದ್ದಂತೆ ಪ್ರಕಟಿಸುವ ಕುರಿತು.

ಸಾರ್ವಜನಿಕ ಶಿಕ್ಷಣ ಇಲಾಖೆಯ ಗ್ರೂಪ್ 'ಎ' ಶ್ರೇಣಿಯ ಹಿರಿಯ ಸಹಾಯಕ ನಿರ್ದೇಶಕರು, (ಬೋಧಕೇತರ) ವೃಂದದ ಅಧಿಕಾರಿಗಳ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ದಿನಾಂಕ : 01–01–2012ರಲ್ಲಿರುವಂತೆ ಸರ್ಕಾರದ ಅಧಿಸೂಚನೆ ಸಂಖ್ಯೆ ; ಇಡಿ 09 ಡಿಪಿಇ 2012, ದಿನಾಂಕ : 18/02/2012ರಂದು ಪ್ರಕಟಿಸಿ, ಈ ತಾತ್ಕಾಲಿಕ ಜೇಷ್ಠತಾ ಪಟ್ಟಿಗೆ ಸಂಬಂಧಿಸಿದಂತೆ, ಇದರಿಂದ ಬಾಧಿತರಾಗಬಹುದಾದಂತಹ ಅಧಿಕಾರಿಗಳು ಈ ಅಧಿಸೂಚನೆ ಹೊರಡಿಸಿದ ದಿನಾಂಕದಿಂದ 30 ದಿನಗಳೊಳಗಾಗಿ ತಮ್ಮ ಆಕ್ಷೇಪಣೆ/ಸಲಹೆ/ಸೂಚನೆಗಳಿದ್ದಲ್ಲಿ, ಅದನ್ನು ಸಮರ್ಥಿಸುವಂತಹ ದಾಖಲೆಗಳೊಂದಿಗೆ, ಸಲ್ಲಿಸುವಂತೆ ಈ ನಿಗಧಿತ ಅವಧಿ ಮುಗಿದ ನಂತರ ಬಂದ ಆಕ್ಷೇಪಣೆಗಳು/ಸಲಹೆಗಳನ್ನು ಪರಿಗಣಿಸಲಾಗುವುದಿಲ್ಲವೆಂದು ತಿಳಿಸಲಾಗಿತ್ತು.

ಸದರಿ ಜೇಷ್ಠತಾ ಪಟ್ಟಿಯ ಬಗ್ಗೆ ಸಂಬಂಧಪಟ್ಟ ಅಧಿಕಾರಿಗಳಿಂದ ನಿಗಧಿತ ಅವಧಿಯಲ್ಲಿ ಯಾವುದೇ ಆಕ್ಷೇಪಣೆ ಸ್ವೀಕೃತವಾಗಿಲ್ಲವೆಂಬುದನ್ನು ಪರಿಶೀಲಿಸಿ, ಸಾರ್ವಜನಿಕ ಶಿಕ್ಷಣ ಇಲಾಖೆಯ, ಗ್ರೂಪ್–'ಎ' ಹಿರಿಯ ಶ್ರೇಣಿಯ ಉಪ ನಿರ್ದೇಶಕರು ಹಾಗೂ ತತ್ಸಮಾನ ವೃಂದದ ಅಧಿಕಾರಿಗಳ ದಿನಾಂಕ : 01/01.2012 ರಲ್ಲಿದ್ದಂತೆ ಅಂತಿಮ ಜೇಷ್ಠತಾ ಪಟ್ಟಿಯನ್ನು ಅನುಬಂಧದಲ್ಲಿರುವಂತೆ ಪ್ರಕಟಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ಬಿ. ಪಟಗಾರ್,**

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ (ಆಡಳಿತ).

ಅನುಬಂಧ

(ಸಂಖ್ಯೆ : ಇಡಿ 09 ಡಿಪಿಐ 2012, ಬೆಂಗಳೂರು, ದಿನಾಂಕ : 23ನೇ ಏಪ್ರಿಲ್ 2012)

ಸಾರ್ವಜನಿಕ ಶಿಕ್ಷಣ ಇಲಾಖೆಯ ಹಿರಿಯ ಸಹಾಯಕ ನಿರ್ದೇಶಕರು (ಬೋಧಕೇತರ) ವೃಂದದ ಅಧಿಕಾರಿಗಳ ಅಂತಿಮ ಜೇಷ್ಠತಾ ಪಟ್ಟಿ

ದಿನಾಂಕ : 01/01/2012ರಲ್ಲಿದ್ದಂತೆ.

| ಕ್ರಮ ಸಂಖ್ಯೆ | ಸಹಾಯಕ ನಿರ್ದೇಶಕರ ವೃಂದದ ಜೇಷ್ಠತಾ ಸಂಖ್ಯೆ | ಅಧಿಕಾರಿಗಳ ಹೆಸರು ಶ್ರೀ/ಶ್ರೀಮತಿ | ಜನ್ಮ ದಿನಾಂಕ | ಸ್ಥಾನಪನ್ನ ಬಡ್ತಿ ಪಡೆದ ದಿನಾಂಕ | ಪರಿಶಿಷ್ಟ ಜಾತಿ/ಪಂಗಡ/ ಸಾಮಾನ್ಯ |
|---|---|---|---|---|---|
| 1 | 2 | 3 | 4 | 5 | 6 |
| 1. | – | ಕೆ. ಎಂ. ಸುಶೀಲಾ | 25/12/1931 | 19/07/1989 | ನಿವೃತ್ತಿ |
| 2. | – | ಬಿ. ಕೃಷ್ಣಾಸಿಂಗ್ | 14/03/2933 | 19/07/1989 | ನಿವೃತ್ತಿ |
| 3. | – | ಬಿ. ಟಿ. ಬಂಗಾರಮ್ಮ | 20/12/1938 | 19/07/1989 | ನಿವೃತ್ತಿ |
| 4. | – | ಕೆ. ರಾಮಚಂದ್ರಚಾರ್ | 30/08/1933 | 19/07/1989 | ನಿವೃತ್ತಿ |
| 5. | 27 | ಹೆಚ್. ಎಸ್. ಸಿದ್ದಯ್ಯ | 20–06–1932 | 29/06/1990 | ನಿವೃತ್ತಿ |
| 6. | 8 | ಕೆ. ಸುಂದರ್ ರಾಜ್ | 08/03/1935 | 29/06/1990 | ನಿವೃತ್ತಿ |
| 7. | 20 | ಟಿ. ಎಂ. ಸಿದ್ದಲಿಂಗಪ್ಪ | 21/04/1940 | 06/05/1996 | ಪ.ಪಂ |
| 8. | 22 | ಜಬಾಡೆ ಅಣ್ಣಪ್ಪ | 04/05/1949 | 06/05/1996 | ಪ.ಪಂ |
| 9. | 25 | ಜಿ. ಎಂ. ಜಯಕುಮಾರ್ | 03/03/1939 | 06/05/1996 | ನಿವೃತ್ತಿ |
| 10. | 38 | ಬಿ. ಎನ್. ಶ್ರೀನಿವಾಸಲು | 01/06/1938 | 06/05/1996 | ನಿವೃತ್ತಿ |
| 11. | 41ಎ | ಎಂ. ಕೆ. ಸುರಪುರ | 01/06/1950 | 06/05/1996 | ನಿವೃತ್ತಿ |
| 12. | 54 | ಎಂ. ವೆಂಕಟರಮಣಪ್ಪ | 30/09/1939 | 06/05/1996 | ನಿವೃತ್ತಿ |
| 13. | 55 | ಟಿ. ವಿ. ಹನುಮಂತಪ್ಪ | 03/02/1948 | 16/10/1998 | ನಿವೃತ್ತಿ |
| 14. | 66 | ಸಿ. ಎನ್. ವಿಜಯಕುಮಾರ್ | 26/03/1953 | 02/01/2006 | ಸಾಮಾನ್ಯ |
| 15. | 68 | ಕೆ. ಎಲ್. ವೀರಣ್ಣ | 01/03/1948 | 02/01/2006 | ನಿವೃತ್ತಿ |
| 16. | 69 | ಪಿ. ಆರ್. ದೊಡ್ಡಕುರುಬರ್ | 01/06/1950 | 02/01/2006 | ನಿವೃತ್ತಿ |
| 17. | 70 | ಬಿ. ಸಿ. ನೀಲಮ್ಮ | 18/02/1949 | 02/01/2006 | ನಿವೃತ್ತಿ |
| 18. | 71 | ಟಿ. ಸಿ. ವನಜ | 02/02/1951 | 02/01/2006 | ನಿವೃತ್ತಿ |
| 19. | 74 | ಎ. ಎ. ಕಾಮತ್ | 17/05/1949 | 02/04/2007 | ನಿವೃತ್ತಿ |
| 20. | 75 | ಜೆ. ಮಂಜುನಾಥ್ | 15/02/1951 | 02/04/2007 | ಸ್ವಯಂ ನಿವೃತ್ತಿ |
| 21. | 98 | ಕೆ. ವಿ. ರಂಗಣ್ಣ | 25/07/1949 | 24/07/2007 | ನಿವೃತ್ತಿ |
| 22. | 100 | ಎಂ. ಪಿ. ಬೊಳ್ಳಮ್ಮ | 20/04/1952 | 24/07/2007 | ಸ್ವಯಂ ನಿವೃತ್ತಿ |
| 23. | 105 | ಡಿ. ಜಿ. ನಾಯಕ್ | 05/09/1949 | 22/09/2007 | ನಿವೃತ್ತಿ |
| 24. | 170 | ಎಂ. ಎಂ. ಮಧಾಳೆ | 01/06/1951 | 08/01/2008 | ಪ.ಜಾತಿ/ನಿವೃತ್ತಿ |
| 25. | 109 | ಪಿ. ಸಿ. ಕೋಕಿತ್ಕರ್ | 24/05/1950 | 08/01/2008 | ನಿವೃತ್ತಿ |

| ಕ್ರಮ ಸಂಖ್ಯೆ | ಸಹಾಯಕ ನಿರ್ದೇಶಕರ ವೃಂದದ ಜೇಷ್ಠತಾ ಸಂಖ್ಯೆ | ಅಧಿಕಾರಿಗಳ ಹೆಸರು ಶ್ರೀ/ಶ್ರೀಮತಿ | ಜನ್ಮ ದಿನಾಂಕ | ಸ್ಥಾನಪನ್ನ ಬಡ್ತಿ ಪಡೆದ ದಿನಾಂಕ | ಪರಿಶಿಷ್ಟ ಜಾತಿ/ಪಂಗಡ/ ಸಾಮಾನ್ಯ |
|---|---|---|---|---|---|
| 26. | 167ಎ | ಎಸ್. ಕುಮಾರಶೆಟ್ಟಿ | 21/12/1953 | 05/04/2011 | ಪ.ಜಾತಿ |
| 27. | 91 | ಪ್ರಭು ಸೋನಾಳೆ | 08/02/1954 | 05/04/2011 | ಸಾಮಾನ್ಯ |
| 28. | 119 | ಮೊಹಮ್ಮದ್ ಮುಬೀನ್ | 03/05/1951 | 05/04/2011 | ನಿವೃತ್ತಿ |
| 29. | 120 | ಬಿ. ಗಿರಿಯಪ್ಪ | 04/09/1951 | 05/04/2011 | ನಿವೃತ್ತಿ |
| 30. | 171 | ಬಿ. ನಿಂಗಯ್ಯ | 03/06/1951 | 05/04/2011 | ನಿವೃತ್ತಿ |
| 31. | 121 | ಬಾಬಾಜಾನ್ | 21/11/1951 | 29/07/2011 | ನಿವೃತ್ತಿ |

**ಎಸ್. ಬಿ. ಪಟಗಾರ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಆಡಳಿತ).

ಪಿ.ಆರ್. ನಂ. **612**

**IN THE COURT OF COMMISSIONER FOR WORKMEN'S COMPENSATION BIDAR.**

## PROCLAIMATION

**No. LOB/WCA/Cr-. F 14/2012**

| Applicants : | V/s. | Respondents : |
|---|---|---|
| 1. Mumtaz Begum w/o Md. Madar Sab Pahelwon, age about 22 years Occup : household, R/o Weavers colony, Tripuranth Allahnagar Locality at Basavaklyan, Dist. Bidar and others. | | 1. Ikramuddin S/o Imamuddin Baag, Age : major Occupation : Business, Nalbondgalli, Basavaklyana, Dist. Bidar.<br>2. Md. Nooruddin S/o Md. Ismail Mahaveernagar, Hyderabad, &<br>3. Relianace General Insurance Co. Ltd. Hubli. |

Sri/Smt : Mumtaz Begum, w/o. Md. Madar Sab Pahelwan, R/o Allah nagar, Locality, Basava Kalyan, Dist. Bidar. have filed aplication in this Court claiming compensation stating that late Madar Sab Pahelwan was working as Cleaner Under the Respondent No. I he met with an accident arising out of and during the course of employment as a result he died on 24-03-2011.

Wherefore, it is hereby notified for the information of these concerned that other dependents if any may file their claim application and objections within 30 days from the date of publication of this proclaimation, if no applications on objections are received within the specified date the court will proceeded further in the matter.

. . . . . . . . . . . . .
Commissioner for Workmen's
Compensation, Bidar.

**P.R. 672**

## ನಗರಾಭಿವೃದ್ಧಿ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ : ನಅಇ 92 ಬೆಮಪ್ರಾ 2012, ಬೆಂಗಳೂರು, ದಿನಾಂಕ : 30ನೇ ಏಪ್ರಿಲ್, 2012.**

ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 4–(ಎ)ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ಕರ್ನಾಟಕ ಸರ್ಕಾರವು ಹೊನ್ನಾವರ ಪಟ್ಟಣ ಪಂಚಾಯಿತಿ ವ್ಯಾಪ್ತಿ ಪ್ರದೇಶವನ್ನು ಸ್ಥಳೀಯ ಯೋಜನಾ ಪ್ರದೇಶವೆಂದು ಘೋಷಿಸಲಾಗಿದೆ. ಹಾಗೂ ಇದೇ ಕಾಯ್ದೆಯ ಕಲಂ 2(7)(ಬಿ) ರಲ್ಲಿನ ಅವಕಾಶದಂತೆ ಹೊನ್ನಾವರ ಪಟ್ಟಣ ಪಂಚಾಯಿತಿ ಯೋಜನಾ ಪ್ರಾಧಿಕಾರವಾಗಿ ಕೂಡಲೇ ಜಾರಿಗೆ ಬರುವಂತೆ ಕಾರ್ಯನಿರ್ವಹಿಸತಕ್ಕದ್ದು.

ಅನುಬಂಧ-1 ರಲ್ಲಿ ಹೊನ್ನಾವರ ಪಟ್ಟಣ ಪಂಚಾಯಿತಿಯ ಎಲ್ಲೆಯಲ್ಲಿ ಬರುವ ಗ್ರಾಮಗಳ ಮತ್ತು ಸರ್ವೆ ನಂಬರುಗಳ ವಿವರಗಳನ್ನು ಹಾಗೂ ಅನುಬಂಧ-2ರಲ್ಲಿ ಹೊನ್ನಾವರ ಪಟ್ಟಣದ ಪ್ರಸ್ತಾವಿತ ಸ್ಥಳೀಯ ಯೋಜನಾ ಪ್ರದೇಶದ ಎಲ್ಲೆಯ ವಿವರಗಳನ್ನು ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ. ಎಂ. ವಾಸುದೇವ ರಾವ್,**
ಸರ್ಕಾರದ ಅಧೀನ ಕಾರ್ಯದರ್ಶಿಗಳು,
ನಗರಾಭಿವೃದ್ಧಿ ಇಲಾಖೆ.

**ಅನುಬಂಧ-1**

ಪ್ರಸ್ತಾವಿತ ಪಟ್ಟಣ ಪಂಚಾಯತ್ ಎಲ್ಲೆಯಲ್ಲಿ ಬರುವ ಗ್ರಾಮಗಳ ಮತ್ತು ಸರ್ವೆ ನಂಬರುಗಳ ಯಾದಿ

| ಕ್ರಮ ಸಂಖ್ಯೆ | ಪಟ್ಟಣ/ಗ್ರಾಮದ ಹೆಸರು | ಸರ್ವೆ ನಂ. ಇತ್ಯಾದಿ |
|---|---|---|
| 1 | ಹೊನ್ನಾವರ | ಹೊನ್ನಾವರ ಸಂಪೂರ್ಣ ಕಂದಾಯ ಗ್ರಾಮದಲ್ಲಿ ರಿ.ಸ.ನಂ. 1 ರಿಂದ 128, ರಿ.ಸ.ನಂ. 143 ರಿಂದ 292, 294 ರಿಂದ 592, ರಿ.ಸ.ನಂ. 594, 596, 597, 598, 599, 601, 602, 603, ರಿ.ಸ.ನಂ. 605 ರಿಂದ 611 ರಿಂದ 621, ರಿ.ಸ.ನಂ. 637, 638, 639, 641, 642,ರ ವರೆಗಿನ ಸರ್ವೆ ನಂಬರುಗಳು ಸೇರಿರುತ್ತವೆ. |

ಷರಾ :-1) ಹೊನ್ನಾವರ ಸಂಪೂರ್ಣ ಕಂದಾಯ ಗ್ರಾಮದಲ್ಲಿ ರಿ.ಸ.ನಂ. 129 ರಿಂದ 138, ರಿ.ಸ.ನಂ. 142, ರಿ.ಸ.ನಂ. 600, ರಿ.ಸ.ನಂ. 622 ರಿಂದ 635 ಹಾಗೂ ರಿ.ಸ.ನಂ. 640ಗಳು ಪಟ್ಟಣ ಪಂಚಾಯತ ವ್ಯಾಪ್ತಿಯ ಹೊರಗಡೆ ಬರುತ್ತದೆ.

2) ಹೊನ್ನಾವರ ಸಂಪೂರ್ಣ ಕಂದಾಯ ಗ್ರಾಮದಲ್ಲಿ ರಿ.ಸ.ನಂ. 139, 140, 141ಗಳು ಸಮುದ್ರದಲ್ಲಿ ಸೇರಿರುತ್ತವೆ.

3) ರಿ.ಸ.ನಂ. 293, 580, 593, 595, 604,636ಗಳು ಗ್ರಾಮ ನಕ್ಷೆಯಲ್ಲಿ ನಮೂದು ಇರುವುದಿಲ್ಲ.

**ಟಿ. ಎಂ. ವಾಸುದೇವ ರಾವ್,**
ಸರ್ಕಾರದ ಅಧೀನ ಕಾರ್ಯದರ್ಶಿಗಳು,
ನಗರಾಭಿವೃದ್ಧಿ ಇಲಾಖೆ.

**ಅನುಬಂಧ-2**

**ಹೊನ್ನಾವರ ಪಟ್ಟಣದ ಪ್ರಸ್ತಾವಿತ ಸ್ಥಳೀಯ ಯೋಜನಾ ಪ್ರದೇಶದ ಎಲ್ಲೆಯ ವಿವರಣೆ**

ಹೊನ್ನಾವರ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶದ ಎಲ್ಲೆಯು ರಿ.ಸ.ನಂ. 116ರ ವಾಯುವ್ಯ ಮೂಲೆಯಿಂದ ಪ್ರಾರಂಭವಾಗಿ ಪೂರ್ವದ ಕಡೆಗೆ ರಿ.ಸ.ನಂ. 115, 112, 111, 108, 109ರ ಉತ್ತರ ಗಡಿಯ ಮುಖಾಂತರ ಹೊನ್ನಾವರ ಪಟ್ಟಣದ ರಿ.ಸ.ನಂ. 109ರ ಈಶ್ಯಾನ ಮೂಲೆಯನ್ನು ಸೇರುತ್ತದೆ. ಅಲ್ಲಿಂದ ದಕ್ಷಿಣಕ್ಕೆ ತಿರುಗಿ ರಿ.ಸ.ನಂ. 81 ವಾಯುವ್ಯ ಮೂಲೆಯನ್ನು ಕೂಡಿ ಪೂರ್ವಕ್ಕೆ ತಿರುಗಿ ಅಲ್ಲಿಂದ ರಾಷ್ಟ್ರೀಯ ಹೆದ್ದಾರಿ 17ನ್ನು ಸೇರುತ್ತದೆ. ರಾಷ್ಟ್ರೀಯ ಹೆದ್ದಾರಿಯನ್ನು ದಾಟಿ ಹೊನ್ನಾವರ ಪಟ್ಟಣದ ರಿ.ಸ.ನಂ. 455 ಪಶ್ಚಿಮದ ಗಡಿಯ ಗುಂಟ ಉತ್ತರಕ್ಕೆ ಚಲಿಸಿ ರೈಲುಮಾರ್ಗವನ್ನು ದಾಟಿ ರಿ.ಸ.ನಂ. 464ರ ವಾಯುವ್ಯ ಮೂಲೆಯಿಂದ ಪೂರ್ವಕ್ಕೆ ತಿರುಗಿ ಮುಂದೆ ರಿ.ಸ.ನಂ. 464, 465ರ ಪಶ್ಚಿಮದ ಗಡಿಯ ಗುಂಟ ಉತ್ತರಕ್ಕೆ ಚಲಿಸಿ 465ರ ವಾಯುವ್ಯ ಮೂಲೆಯನ್ನು ಸೇರುತ್ತದೆ. 465ರ ವಾಯುವ್ಯ ಮೂಲೆಯಿಂದ ಪೂರ್ವಕ್ಕೆ ತಿರುಗಿ ಕರ್ಕಿ ಗ್ರಾಮದ ದಕ್ಷಿಣದ ಗಡಿಯ ಗುಂಟ ಸಾಗಿ ಚಂದಾವರ ರಸ್ತೆಯನ್ನು ಸಂಧಿಸಿ ನಂತರ ಮುಂಡಗೋಡ ಗ್ರಾಮದ ಪಶ್ಚಿಮದ ಗಡಿಯನ್ನು ಸೇರಿ ಮುಂಡಗೋಡ ಗ್ರಾಮದ ಪಶ್ಚಿಮದ ಗಡಿಯಿಂದ ದಕ್ಷಿಣಕ್ಕೆ ಸಾಗಿ ಹೊನ್ನಾವರ ಸ.ನಂ. 499ರ ಪೂರ್ವದ ಗಡಿಯ ಮುಖಾಂತರ ಬಿ. ಎಚ್. (ಸಾಗರ್) ರಸ್ತೆಯನ್ನು ಸೇರುತ್ತದೆ. ನಂತರ ಕುಲಗೋಡ ಗ್ರಾಮದ ಪಶ್ಚಿಮದ ಗಡಿಯ ಗುಂಟ ದಕ್ಷಿಣಕ್ಕೆ ಚಲಿಸಿ ಹೊನ್ನಾವರ ಪಟ್ಟಣದ ರಿ.ಸ.ನಂ. 235ರ ಈಶಾನ್ಯ ಮೂಲೆಯೊಂದಿಗೆ ಶರಾವತಿ ನದಿಯ ದಂಡೆಗೆ ಸೇರುತ್ತದೆ. ಅಲ್ಲಿಂದ ಪಶ್ಚಿಮದ ಕಡೆಗೆ ತಿರುಗಿ ಶರಾವತಿ ನದಿ ತೀರದ ಉತ್ತರದ ಗಡಿಯ ಗುಂಟ ಸಾಗಿ ಹೊನ್ನಾವರ ಗ್ರಾಮದ ರಿ.ಸ.ನಂ. 234, 230ರ ಮುಖಾಂತರ ಸಾಗಿ ರೈಲು ಮಾರ್ಗವನ್ನು ದಾಟಿ ರಿ.ಸ.ನಂ. 225, 221, 220 218, 207, 206, 205, 199, 198, 196ರ ಇತ್ಯಾದಿಗಳ ಮೂಲಕ ದಕ್ಷಿಣ ಗಡಿಗುಂಟ ಶರಾವತಿ ನದಿಯ ಉತ್ತರ ತೀರದಿಂದ ಸಾಗುತ್ತ ರಾ.ಹೆ. 17ನ್ನು ಸೇರುತ್ತದೆ. ಅಲ್ಲಿದ ಪಶ್ಚಿಮ ದಿಕ್ಕಿಗೆ ರಿ.ಸ.ನಂ. 171, 165, 594ರ ದಕ್ಷಿಣ ಗಡಿಗುಂಟ ಸಾಗಿ 162ರ ನೈರುತ್ಯ ಮೂಲೆಯನ್ನು ಸೇರುತ್ತದೆ ಅಲ್ಲಿಂದ ಉತ್ತರಕ್ಕೆ ಶರಾವತಿ ನದಿ ದಡದ ಪೂರ್ವಗಡಿಗುಂಟ ಚಲಿಸುತ್ತ ರಿ.ಸ.ನಂ. 116ರ ವಾಯುವ್ಯ ಮೂಲೆಯನ್ನು ಸೇರುತ್ತದೆ.

**ಟಿ. ಎಂ. ವಾಸುದೇವ ರಾವ್,**
ಸರ್ಕಾರದ ಅಧೀನ ಕಾರ್ಯದರ್ಶಿಗಳು,
ನಗರಾಭಿವೃದ್ಧಿ ಇಲಾಖೆ.

**ಪಿ.ಆರ್. 671**

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟಪರಿಹಾರ ಕಾಯ್ದೆಯಡಿ ಆಯುಕ್ತರು, ಗದಗ ಜಿಲ್ಲೆ, ಗದಗ ಇವರ ನ್ಯಾಯಾಲಯದಲ್ಲಿ**

**ಪ್ರಕಟಣೆ**

**ಸಂಖ್ಯೆ : ಕಾಅಗ/ಕಾನಪ/ಎಫ್–21/2012, ದಿನಾಂಕ 10ನೇ ಮೇ 2012**

**ಅರ್ಜಿದಾರರು :–**

1) ಶ್ರೀಮತಿ ಮೆಹೆಬೂಬಬಿ W/o ಅಬ್ದುಲ್ ಗನಿ ಹನ್ನೂರಿ @ ಅತ್ತಾರ

2) ಕು॥ ಸಬಿಯಾ D/o ಅಬ್ದುಲ್ ಗನಿ ಹನ್ನೂರಿ @ ಅತ್ತಾರ

3) ಕು॥ ಜಾಫರ್ S/o ಅಬ್ದುಲ್ ಗನಿ ಹನ್ನೂರಿ @ ಅತ್ತಾರ
ಇವರೆಲ್ಲರ ವಿಳಾಸ : ಲೋಕಪ್ಪನ ಹಕ್ಕಲ ; 8ನೇ ಕ್ರಾಸ್, H.No. 176
ವಿದ್ಯಾನಗರ, ಹುಬ್ಬಳ್ಳಿ.

ವಿರುದ್ಧ

**ಪ್ರತಿವಾದಿಗಳು :–**

1) ಶ್ರೀ ಅನ್ವರ ಅಲಿ S/o ಕಾಸೀಮಲಿ ಭಾವನಗರಿ,
ಉದಯನಗರ, ಹುಬ್ಬಳ್ಳಿ ರಸ್ತೆ, ಗದಗ

2) ದಿ ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂ. ಲಿ.,
ಗಾಂಧಿ ಸರ್ಕಲ್ ಹತ್ತಿರ, ಪಿ.ಬಿ. ರೋಡ್, ಗದಗ.

ಅರ್ಜಿದಾರರಾದ ಶ್ರೀಮತಿ 1) ಮೆಹೆಬೂಬಬಿ W/o ಅಬ್ದುಲ ಗನಿ ಹನ್ನೂರಿ @ ಅತ್ತಾರ, 2) ಕು॥ ಸಬಿಯಾ D/o ಅಬ್ದುಲ ಗನಿ ಹನ್ನೂರಿ @ ಅತ್ತಾರ, 3) ಕು॥ ಜಾಫರ್ S/o ಅಬ್ದುಲ ಗನಿ ಹನ್ನೂರಿ @ ಅತ್ತಾರ, ಲೋಕಪ್ಪನ ಹಕ್ಕಲ ; 8ನೇ ಕ್ರಾಸ್, H.No. 176, ವಿದ್ಯಾನಗರ, ಹುಬ್ಬಳ್ಳಿ. ಇವರು ತಾವು ಮೃತ ಅಬ್ದುಲ ಗನಿ ಹನ್ನೂರಿ @ ಅತ್ತಾರ ಇವರ ಹೆಂಡತಿ ಮತ್ತು ಮಕ್ಕಳು ಎಂದೂ, ಅವರ ಮರಣದಿಂದ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಅಬ್ದುಲ ಗನಿ ಹನ್ನೂರಿ @ ಅತ್ತಾರ ಇವರು ಒಂದನೇ ಪ್ರತಿವಾದಿಗಳಾದ 1) ಶ್ರೀ ಅನ್ವರ ಅಲಿ S/o ಕಾಸೀಮಲಿ ಭಾವನಗರಿ, ಉದಯನಗರ, ಹುಬ್ಬಳ್ಳಿ ರಸ್ತೆ, ಗದಗ, ಇವರಲ್ಲಿ ಚಾಲಕ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲಿ ಅಥವಾ ಬೇರೆ ಯಾರಾದರೂ ಮೃತರ ಕಾನೂನುಬದ್ಧ ಆಶ್ರಿತರೆಂದು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಆಕ್ಷೇಪಣೆಗಳನ್ನಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಕಾರ್ಮಿಕ ಅಧಿಕಾರಿ ,
ಗದಗ ಜಿಲ್ಲೆ ಗದಗ ಹಾಗೂ ಕಾರ್ಮಿಕ ನಷ್ಟ ಪರಿಹಾರ
ಕಾನೂನು ಅಡಿ ಆಯುಕ್ತರು.

ಪಿಆರ್. 667

**ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಉಪಧನ ಪಾವತಿ ಕಾಯ್ದೆಯಡಿ ನಿಯಂತ್ರಣಾಧಿಕಾರಿಯವರ ನ್ಯಾಯಾಲಯ, ವಿಭಾಗ–4, ಬೆಂಗಳೂರು**

**ಪ್ರಕಟಣೆ**

**ಸಂಖ್ಯೆ : ಪಿಜಿಎ/ಸಿಆರ್–102/2011–12, ದಿನಾಂಕ 09ನೇ ಮೇ 2012**

**ಅರ್ಜಿದಾರರು**

The Manager,
Trianz Holdings Pvt. Ltd.,
No. 165/2, 6th Floor, Kalyani Magnum, Doraisani Palya,
IIM Post, Bannerghatta Road, Bangalore-560 007

**ಪ್ರತಿವಾದಿಗಳು**

1. Mrs. Ruchi Goel,
W/o Late Sri Ashish Goel, D/o Sri D. K. Sindhal,
47-Ganj Bazar, Merrut Cantt-250 001.
2. Mr. Yadram Goel, Father of Late Sri Ashish Goel, Vinay Goel, Brother of Late Sri Ashish Goel, 4 Saket Colony, Surendra Nagar,
Aligarh-202 001, Uttar Pradesh.

ಈ ಮೂಲಕ ಸಾರ್ವಜನಿಕರಿಗೆ ಹಾಗೂ ಸಂಬಂಧಪಟ್ಟವರಿಗೆ ತಿಳಿಯಪಡಿಸುವುದೇನೆಂದರೆ, ಮೇಲ್ಕಂಡ ಅರ್ಜಿದಾರರು ಈ ಪ್ರಾಧಿಕಾರದ ನ್ಯಾಯಾಲಯದಲ್ಲಿ ದಿನಾಂಕ : 09–12–2011 ರಂದು ತಮ್ಮ ಸಂಸ್ಥೆಯ ಕಾರ್ಮಿಕರಾದ ಶ್ರೀ Ashish Goel, ರವರು ದಿನಾಂಕ : 23–06–2010 ರಂದು ಆತ್ಮಹತ್ಯೆ ಮಾಡಿಕೊಂಡಿದ್ದು ಅವರಿಗೆ ಸಂಬಂಧ ಪಟ್ಟ ಉಪಧನ ಮೊತ್ತವನ್ನು ಅರ್ಹ ಕಾನೂನುಬದ್ಧ ವಾರಸುದಾರರಿಗೆ ನೀಡಬೇಕೆಂದು ಕೋರಿ ಈ ಪ್ರಾಧಿಕಾರದಲ್ಲಿ ಠೇವಣಿ ಮಾಡಿರುತ್ತಾರೆ. ಶ್ರೀ Ashish Goel, ರವರು ಪತ್ನಿ ಶ್ರೀಮತಿ Ruchi Goel, ಹಾಗೂ ಅವರ ತಂದೆ ಶ್ರೀ Yadram Goel, ಇವರುಗಳು ಮೃತ ಶ್ರೀ Ashish Goel, ರವರ ಕಾನೂನು ಬದ್ದ ವಾರಸುದಾರರು ಎಂದು ಈ ನ್ಯಾಯಾಲಯದ ಮುಂದೆ ಹಾಜರಾಗಿರುತ್ತಾರೆ.

ಸದರಿ ಪ್ರಕರಣದ ವಿಚಾರಣೆಯು ಈ ನ್ಯಾಯಾಲಯದಲ್ಲಿ ಪ್ರಸಕ್ತದಲ್ಲಿ ನಡೆಯುತ್ತಿದ್ದು, ಈ ಬಗ್ಗೆ ಆದೇಶ ಹೊರಡಿಸಬೇಕಾಗಿರುವುದರಿಂದ, ಮೇಲೆ ಸೂಚಿಸಿರುವ ಪ್ರಕರಣದಲ್ಲಿ ಅರ್ಜಿದಾರರುಗಳನ್ನು ಹೊರತುಪಡಿಸಿ, ಬೇರೆ ಯಾರಾದರೂ ಸದರಿ ಕಾರ್ಮಿಕರಿಗೆ ಸಂಬಂಧಿಸಿದ ಶಾಸನಬದ್ಧ ವಾರಸುದಾರರು/ಜೀವಂತ ಕುಟುಂಬ ಸದಸ್ಯರು ಎಂದು ಪರಿಗಣಿಸಲು ಪ್ರಾರ್ಥಿಸುವುದಾದಲ್ಲಿ, ಅಂತಹವರು ಈ ಪ್ರಕಟಣೆಯನ್ನು ರಾಜ್ಯ ಪತ್ರದಲ್ಲಿ ಪ್ರಕಟಿಸಿದ ಮೂವತ್ತು (30) ದಿನಗಳೊಳಗಾಗಿ ತಮ್ಮ ಲಿಖಿತ ಆಕ್ಷೇಪಣೆಗಳನ್ನು, ಸಕ್ಷಮ ಪ್ರಾಧಿಕಾರದಿಂದ ಪಡೆದ ಸೂಕ್ತ ಮೂಲ ದಾಖಲೆಗಳು ಹಾಗೂ ಇತರೆ ಸಾಕ್ಷ್ಯಾಧಾರಗಳೊಂದಿಗೆ, ಈ ಪ್ರಾಧಿಕಾರದ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದೆಂದು ಈ ಮೂಲಕ ಸೂಚಿಸಲಾಗಿದೆ.

ಈ ರಾಜ್ಯಪತ್ರದಲ್ಲಿ ವಿಧಿಸಿರುವ ಮೇಲ್ಕಂಡ ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲವೆಂದು ಈ ಮೂಲಕ ಸ್ಪಷ್ಟಪಡಿಸಲಾಗಿದೆ.

**ಡಾ॥ ಶ್ರೀಪಾದ ಎಸ್. ಬಿ.**
ಸಹಾಯಕ ಕಾರ್ಮಿಕ ಆಯುಕ್ತರು ಮತ್ತು ನಿಯಂತ್ರಣಾಧಿಕಾರಿಗಳು,
ಉಪಧನ ಪಾವತಿ ಕಾಯ್ದೆ, ವಿಭಾಗ–4, ಬೆಂಗಳೂರು.

ಪಿ.ಆರ್. 666

**ಸಹಕಾರ ಸಂಘಗಳ ಉಪನಿಬಂಧಕರು, ದಕ್ಷಿಣ ವಲಯ, ಬೆಂಗಳೂರು ನಗರ ಜಿಲ್ಲೆರವರ ಕಛೇರಿ, ಜಿ.ಎಂ.ಸಿ. ಬ್ಯಾಂಕ್ ಆವರಣ ಕಟ್ಟಡ, ಪಂಪಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು–18**

**ವಿಷಯ :** ಸಮಾಪನೆಗೊಂಡ ಸಹಕಾರ ಸಂಘಗಳ ನೋಂದಣಿ ಸಂಖ್ಯೆಯನ್ನು ರದ್ದುಗೊಳಿಸುವ ಬಗ್ಗೆ.

**ಉಲ್ಲೇಖ :** ಸಹಕಾರ ಸಂಘಗಳ ಸಹಾಯಕ ನಿಬಂಧಕರು ಬೆಂಗಳೂರು ದಕ್ಷಿಣ ವಲಯ ಬೆಂಗಳೂರುರವರ ಪತ್ರ ಸಂಖ್ಯೆ ಎಆರ್ ಬಿ–50/ಸಮಾಪನೆ/ನೋ.ರ/47/2011–12 ದಿನಾಂಕ : 19/03/2012.

* * * *

**ಪ್ರಸ್ತಾವನೆ :–**

ಸಮಾಪನೆಯಲ್ಲಿರುವ ಕೆಳಕಂಡ ಸಹಕಾರ ಸಂಘಗಳ ನೋಂದಣಿಯನ್ನು ರದ್ದುಗೊಳಿಸುವಂತೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಬೆಂಗಳೂರು ದಕ್ಷಿಣ ವಲಯ, ಬೆಂಗಳೂರುರವರ ಉಲ್ಲೇಖಿತ ಪ್ರಸ್ತಾವೆಯಲ್ಲಿ ತಿಳಿಸಿರುತ್ತಾರೆ. ಸದರಿ ಸಹಕಾರ ಸಂಘಗಳು ನೋಂದಾಯಿತ ವಿಳಾಸದಲ್ಲಿ ಕಾರ್ಯನಿರ್ವಹಿಸದೇ ಸಂಘದ ಅಸ್ತಿತ್ವದ ಬಗ್ಗೆ ಸ್ಥಳೀಯ ವಿಚಾರಣೆಯಿಂದಲೂ ಮಾಹಿತಿ ಲಭ್ಯವಾಗದೇ ಇರುವುದರಿಂದ ಸಮಾಪನಾಧಿಕಾರಿಯವರು ಸ್ವಯಂ ಪ್ರಭಾರ ವಹಿಸಿಕೊಂಡಿರುವುದಾಗಿ ವರದಿಸಿರುತ್ತಾರೆ. ಸದರಿ ಸಹಕಾರ ಸಂಘಗಳ ನೋಂದಣಿ ಸಂಖ್ಯೆಯನ್ನು ರದ್ದುಗೊಳಿಸುವ ಬಗ್ಗೆ ದಿನಾಂಕ: 24–03–2011ರಂದು ಸಂಜೆವಾಣಿ ದಿನಪತ್ರಿಕೆಯಲ್ಲಿ ಪ್ರಕಟಣೆ ಹೊರಡಿಸಿದ್ದಾಗ್ಯೂ ಸಂಘದ ನೋಂದಣಿ ರದ್ದತಿಗೆ ಸಂಬಂಧಿಸಿದಂತೆ ಯಾವುದೇ ಆಕ್ಷೇಪಣೆಗಳು ಸ್ವೀಕೃತವಾಗದೆ ಇರುವುದರಿಂದ ಈ ಕೆಳಕಂಡ ಸಹಕಾರ ಸಂಘಗಳ ನೋಂದಣಿ ಸಂಖ್ಯೆಯನ್ನು ರದ್ದುಪಡಿಸುವಂತೆ ಕೋರಿರುತ್ತಾರೆ.

| ಕ್ರ.ಸಂ. | ಸಮಾಪನೆಗೊಂಡ ಸಹಕಾರ ಸಂಘದ ಹೆಸರು | ನೋಂದಣಿ ಕ್ರಮಾಂಕ ಮತ್ತು ದಿನಾಂಕ | ಸಮಾಪನಾ ಆದೇಶ ಸಂಖ್ಯೆ ಮತ್ತು ದಿನಾಂಕ |
|---|---|---|---|
| 1. | ಮಂಜುನಾಥ ಬಳಕೆದಾರರ ಸಹಕಾರ ಸಂಘ ನಿ., ನಾರಾಯಣಪುರ ಬೆಂಗಳೂರು. | ಎಆರ್‌ಬಿ/ನೋ/26738/99–2000 ದಿನಾಂಕ : 02/10/1999 | ಡಿಆರ್‌ಬಿ–2/ಸಮಾಪನೆ/66/2010–11 ದಿನಾಂಕ : 30–08–2010 |
| 2. | ಜೀವನಭೀಮಾನಗರ ಬಳಕೆದಾರರ ಸಹಕಾರ ಸಂಘ ನಿ., ಜೀವನಭೀಮಾನಗರ, ಬೆಂಗಳೂರು | ಎಆರ್‌ಬಿ/ನೋ/19424/91–92 ದಿನಾಂಕ : 07/04/1992 | ಡಿಆರ್‌ಬಿ–2/ಸಮಾಪನೆ/66/2010–11 ದಿನಾಂಕ : 31–08–2010 |
| 3. | ಉಷಾ ಮಾರ್ಟಿನ್ ನೌಕರರ ಪತ್ತಿನ ಸಹಕಾರ ಸಂಘ ನಿ., ಬೆಂಗಳೂರು | ಎಆರ್‌ಬಿ/ನೋ/17076/90–90–91 ದಿನಾಂಕ : 31/08/1990 | ಡಿಆರ್ ಬಿ–2/ಸಮಾಪನೆ/66/2010–11 ದಿನಾಂಕ : 31/08/2010 |

ಮೇಲಿನ ಸಹಕಾರ ಸಂಘಗಳಿಗೆ ಬಹಳ ಹಿಂದಿನಿಂದಲೂ ಲೆಕ್ಕಪರಿಶೋಧನೆ ಬಾಕಿ ಇರುವುದಾಗಿ ಹಾಗೂ ಲೆಕ್ಕಪರಿಶೋಧನಾ ವರದಿಗಳು ಕಛೇರಿಯಲ್ಲಿ ಲಭ್ಯವಿರುವುದಿಲ್ಲವೆಂದು ಉಲ್ಲೇಖ (2)ರಲ್ಲಿ ಸಹಕಾರ ಸಂಘಗಳ ಲೆಕ್ಕಪರಿಶೋಧನಾ ಸಹಾಯಕ ನಿರ್ದೇಶಕರು ಬೆಂಗಳೂರು 2ನೇ ವೃತ್ತ ಬೆಂಗಳೂರುರವರು ತಿಳಿಸಿರುತ್ತಾರೆ. ಸಮಾಪನೆಯಲ್ಲಿರುವ ಸಹಕಾರ ಸಂಘಗಳನ್ನು ಯಥಾಸ್ಥಿತಿಯಲ್ಲಿ ಮುಂದುವರಿಸುವುದರಿಂದ ಸಂಘದ/ಸದಸ್ಯರುಗಳಿಗೆ ಹಾಗೂ ಸಾರ್ವಜನಿಕರಿಗೆ ಯಾವುದೇ ಅನುಕೂಲವಿಲ್ಲದಿರುವುದರಿಂದ ಸಂಘಗಳ ನೋಂದಣಿ ಸಂಖ್ಯೆ ರದ್ದತಿಗೆ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ : ಡಿಆರ್ ಬಿ–ಎಸ್/ಸಮಾಪನೆ/ನೋಂ. ರದ್ದತಿ/08/2011–12, ಬೆಂಗಳೂರು, ದಿನಾಂಕ 31–03–2012**

ಸಮಾಪನೆಯಲ್ಲಿರುವ ಈ ಕೆಳಕಂಡ ಸಹಕಾರ ಸಂಘಗಳ ನೋಂದಣಿ ಸಂಖ್ಯೆಯನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75 ರಡಿಯಲ್ಲಿ ಪ್ರತ್ಯಾಯೋಜಿತವಾಗಿರುವ ಅಧಿಕಾರವನ್ನು ಚಲಾಯಿಸಿ ಬಿ. ಆರ್. ಲಿಂಗರಾಜು, ಸಹಕಾರ ಸಂಘಗಳ ಉಪನಿಬಂಧಕರು, ದಕ್ಷಿಣ ವಲಯ, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಆದ ನಾನು ಈ ಕೆಳಕಂಡ ಸಂಘಗಳ ನೋಂದಣಿ ಸಂಖ್ಯೆಯನ್ನು ರದ್ದುಗೊಳಿಸಿರುತ್ತೇನೆ.

| ಕ್ರ. ಸಂ. | ನೋಂದಣಿ ರದ್ದುಪಡಿಸಿರುವ ಸಹಕಾರ ಸಂಘಗಳು | ರದ್ದುಪಡಿಸಲಾದ ನೋಂದಣಿ ಸಂಖ್ಯೆ ದಿನಾಂಕ |
|---|---|---|
| 1 | ಮಂಜುನಾಥ ಬಳಕೆದಾರರ ಸಹಕಾರ ಸಂಘ (ನಿ) ನಾರಾಯಣಪುರ, ಬೆಂಗಳೂರು. | ಎಆರ್‌ಬಿ/ನೋ/26738/99–2000<br>ದಿನಾಂಕ : 02–10–1999 |
| 2 | ಜೀವನಭೀಮಾನಗರ ಬಳಕೆದಾರರ ಸಹಕಾರ ಸಂಘ (ನಿ) ಜೀವನಭೀಮಾ ನಗರ ಬೆಂಗಳೂರು. | ಎಆರ್‌ಬಿ/ನೋ/19424/91–92<br>ದಿನಾಂಕ : 07–04–1992 |
| 3 | ಉಷಾಮಾರ್ಟಿನ್ ನೌಕರರ ಪತ್ತಿನ ಸಹಕಾರ ಸಂಘ (ನಿ) ಬೆಂಗಳೂರು. | ಎಆರ್‌ಬಿ/ನೋ/17076/90–91<br>ದಿನಾಂಕ : 31–08–1990 |

ಈ ಆದೇಶದ ದಿನಾಂಕದಿಂದ ಸದರಿ ಸಂಘಗಳು ವಿಸರ್ಜಿತವಾಗಿದೆಯೆಂದು ಭಾವಿಸತಕ್ಕದ್ದು ಹಾಗೂ ಸಾಂಘಿಕ/ನಿಗಮಿತ ನಿಕಾಯ (ಕಾರ್ಪೋರೇಟ್ ಬಾಡಿ) ಸಂಸ್ಥೆಯಾಗಿರುವುದು ಅಂತ್ಯಗೊಳ್ಳತಕ್ಕದ್ದು.

ಈ ಆದೇಶವನ್ನು ನನ್ನ ಸ್ವಸಹಿ ಮತ್ತು ಮೊಹರಿನೊಂದಿಗೆ ದಿನಾಂಕ : 31/03/2012 ರಂದು ಹೊರಡಿಸಲಾಗಿದೆ.

**ಬಿ. ಆರ್. ಲಿಂಗರಾಜು,**
ಸಹಕಾರ ಸಂಘಗಳ ಉಪನಿಬಂಧಕರು,
ದಕ್ಷಿಣ ವಲಯ, ಬೆಂಗಳೂರು ನಗರ ಜಿಲ್ಲೆ.

**ಪಿ.ಆರ್. 651**

## ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ ಖನಿಜಭವನ, ಬೆಂಗಳೂರು ಇವರ ನಡವಳಿಗಳು

**ಸಂಖ್ಯೆ : ಗಭೂಇ/ಗಗುಶಾ/371AML 2010/ತಿರಸ್ಕೃತ/2012–13/466, ದಿನಾಂಕ : 08ನೇ ಮೇ 2012.**

**ವಿಷಯ :** ತುಮಕೂರು ಜಿಲ್ಲೆ, ಗುಬ್ಬಿ ತಾಲ್ಲೂಕಿನಲ್ಲಿ ಕ್ವಾರ್ಟ್ಸ್ ಖನಿಜಕ್ಕಾಗಿ ದಿನಾಂಕ : 07–04–2010 ರಂದು ಮೆ॥ ಖಯೂಂ ಮಿನರಲ್ಸ್ ಇವರು ಸಲ್ಲಿಸಿರುವ ಅರ್ಜಿಯನ್ನು ತಿರಸ್ಕರಿಸುವ ಬಗ್ಗೆ.

**ಉಲ್ಲೇಖ :**
1. ಮೆ॥ ಖಯೂಂ ಮಿನರಲ್ಸ್ ಇವರ ಗಣಿಗುತ್ತಿಗೆ ಅರ್ಜಿ ಸಂಖ್ಯೆ 371 ಎಎಂಎಲ್ 2010, ದಿನಾಂಕ : 07–04–2010.
2. ಉಪನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ತುಮಕೂರು ಇವರ ತಾಂತ್ರಿಕ ವರದಿ ದಿನಾಂಕ : 13–01–2012.
3. ಈ ಕಛೇರಿ ನೋಟೀಸ್ ಪತ್ರ ಸಂಖ್ಯೆ : ಗಭೂಇ/371 ಎಎಂಎಲ್ 2010/2011–12/10041 ದಿನಾಂಕ : 03–02–2012
4. ಅರ್ಜಿದಾರರ ಪತ್ರ ದಿನಾಂಕ : 01–03–2012.

* * * *

**ಪ್ರಸ್ತಾವನೆ :–**

ತುಮಕೂರು ಜಿಲ್ಲೆ, ಗುಬ್ಬಿ ತಾಲ್ಲೂಕಿನ ಕುರಿಹಳ್ಳಿ, ಗ್ರಾಮದ ಸರ್ವೆ ನಂಬರ್ : 12, 13, 15,16 ಮತ್ತು 17ರಲ್ಲಿ 215.00 ಎಕರೆ ಪ್ರದೇಶದಲ್ಲಿ ದೊರೆಯಬಹುದಾದ ಕ್ವಾರ್ಟ್ಸ್ ಖನಿಜಕ್ಕಾಗಿ ಗಣಿ ಗುತ್ತಿಗೆ ಕೋರಿ ಮೆ॥ ಖಯೂಂ ಮಿನರಲ್ಸ್ ಎಂಬುವವರು ದಿನಾಂಕ : 07–04–2010 ರಂದು ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಉಪ ನಿರ್ದೇಶಕರು, ತುಮಕೂರು ರವರಿಗೆ ಸದರಿ ಪ್ರದೇಶದಲ್ಲಿ ಲಭ್ಯವಿರುವ ಖನಿಜದ ಬಗ್ಗೆ ಸ್ಪಷ್ಟ ಅಭಿಪ್ರಾಯದೊಂದಿಗೆ ತಾಂತ್ರಿಕ ವರದಿಯನ್ನು ಸಲ್ಲಿಸುವಂತೆ ತಿಳಿಸಲಾಗಿತ್ತು. ಅದರಂತೆ ದಿನಾಂಕ : 13–01–2012ರಂದು ಉಪನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ ಇವರು ಸದರಿ ಪ್ರದೇಶದಲ್ಲಿ ಕ್ವಾರ್ಟ್ಸೈಟ್ ಖನಿಜ ಲಭ್ಯವಿರುವುದಾಗಿ ಸ್ಥಳ ತನಿಖಾ ವರದಿಯನ್ನು ನೀಡಿದ್ದು. ದಿನಾಂಕ : 07–04–2010ರಂದು ಗಣಿಗುತ್ತಿಗೆ ಅರ್ಜಿಯಲ್ಲಿ ನೀವು ಕೋರಿರುವ ಕ್ವಾರ್ಟ್ಸ್ ಖನಿಜವು ಲಭ್ಯವಿಲ್ಲವೆಂದು ತಿಳಿದು ಬಂದ ಹಿನ್ನೆಲೆಯಲ್ಲಿ ನಿಮ್ಮ ಅರ್ಜಿಯನ್ನು ಏಕೆ ತಿರಸ್ಕರಿಸಬಾರದು ಎಂಬುದಕ್ಕೆ 30 ದಿನಗಳೊಳಗಾಗಿ ವಿವರಣೆಯನ್ನು ಸಲ್ಲಿಸುವಂತೆ ಸೂಚಿಸಿ ಖನಿಜ ರಿಯಾಯಿತಿ ನಿಯಮಗಳು 1960ರ ನಿಯಮ 26(1)ರಡಿಯಲ್ಲಿ ದಿನಾಂಕ : 03–02–2012 ರಂದು ನೋಟೀಸು ಜಾರಿ ಮಾಡಲಾಗಿತ್ತು.

ಉಲ್ಲೇಖಿತ 2ರ ನಿಮ್ಮ ಪತ್ರದಲ್ಲಿರುವಂತೆ ವೈಯಕ್ತಿಕ ಕಾರಣಗಳಿಂದ ನೋಟಿಸಿಗೆ ವಿವರಣೆಯನ್ನು ಸಲ್ಲಿಸಲು ಸಾಧ್ಯವಾಗಲಿಲ್ಲವೆಂದು, ಈ ಹಿಂದೆ ಸದರಿ ಪ್ರದೇಶದಲ್ಲಿ ಕ್ವಾರ್ಟ್ಸ್ ಖನಿಜಕ್ಕೆ ಗಣಿಗುತ್ತಿಗೆ ಸಂಖ್ಯೆ : 1194 ಮಂಜೂರಾಗಿದ್ದರಿಂದ ಆ ಪ್ರದೇಶದಲ್ಲಿ ಕ್ವಾರ್ಟ್ಸ್ ಖನಿಜಕ್ಕೆ ಅರ್ಜಿ ಸಲ್ಲಿಸಿರುವುದಾಗಿ ತಿಳಿಸುತ್ತಾ ಸದರಿ ನೋಟೀಸಿಗೆ ಉತ್ತರ ನೀಡಲು 20 ದಿನಗಳ ಕಾಲಾವಕಾಶವನ್ನು ನೀಡುವಂತೆ ಕೋರಿರುತ್ತೀರಿ.

ಅದರಂತೆ ನೀವು ಕೋರಲಾಗಿದ್ದ ಕಾಲಾವಕಾಶವೂ ಸಹ ಮುಗಿದಿದ್ದು, ಇಲ್ಲಿಯವರಗೆ ನಿಮ್ಮಿಂದ ಯಾವುದೇ ವಿವರಣೆ ಬಂದಿರುವುದಿಲ್ಲ. ಇದರಿಂದ ನಿಮಗೆ ಗಣಿಗುತ್ತಿಗೆ ಅರ್ಜಿಯ ಬಗ್ಗೆ ಆಸಕ್ತಿ ಇಲ್ಲವೆಂದು ತಿಳಿದುಬರುತ್ತದೆ. ಹಾಗೂ MM(D&R) Act 1957ರ ಸೆಕ್ಷನ್ 4ರ ಪ್ರಕಾರ ಗಣಿ ಗುತ್ತಿಗೆ ಮಂಜೂರು ಮಾಡಲು ಅಪೇಕ್ಷಿತ ಖನಿಜ ಲಭ್ಯವಿರದ ಕಾರಣ ನಿಮ್ಮ ಅರ್ಜಿಯನ್ನು ಮುಂದುವರೆಸಲು ನಿಯಮಗಳಲ್ಲಿ ಅವಕಾಶವಿರುವುದಿಲ್ಲ. ಆದ್ದರಿಂದ ಈ ಕೆಳಗಿನಂತೆ ಆದೇಶ.

**ಆದೇಶ**

ಈ ಮೇಲೆ ತಿಳಿಸಿರುವ ಕಾರಣಗಳ ಮೇರೆಗೆ ಶ್ರೀ ಹೆಚ್. ಆರ್. ಶ್ರೀನಿವಾಸ, ಭಾ.ಆ.ಸೇ. ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ ಆದ ನಾನು ಸರ್ಕಾರದ ಅಧಿಸೂಚನೆ ಸಂಖ್ಯೆ : CI 03 MMM 95, ದಿನಾಂಕ : 27–05–1995 ಹಾಗೂ ಸಂಖ್ಯೆ : CI 254 MMM 2006 ದಿನಾಂಕ : 09–02–2006 ರಲ್ಲಿ ಪ್ರದತ್ತವಾಗಿರುವ ಅಧಿಕಾರದಡಿಯಲ್ಲಿ ಮೆ॥ ಖಯೂಂ ಮಿನರಲ್ಸ್ ಇವರು ತುಮಕೂರು ಜಿಲ್ಲೆ, ಗುಬ್ಬಿ ತಾಲ್ಲೂಕಿನ ಕುರಿಹಳ್ಳಿ ಗ್ರಾಮದ 215–00 ಎಕರೆ ಪ್ರದೇಶದಲ್ಲಿ ಕ್ವಾರ್ಟ್ಸ್ ಖನಿಜಕ್ಕಾಗಿ ಗಣಿ ಗುತ್ತಿಗೆ ಕೋರಿ ದಿನಾಂಕ : 07–04–2010ರಂದು ಸಲ್ಲಿಸಿದ್ದ ಅರ್ಜಿ ಸಂಖ್ಯೆ : 371 AML 2010ನ್ನು ತಿರಸ್ಕರಿಸಲಾಗಿದೆ.

. . . . . . .
ನಿರ್ದೇಶಕರು.

ಪಿ.ಆರ್. 653

## COMMERCIAL TAXES DEPARTMENT

**PROCEEDINGS OF THE COMMISSIONER OF COMMERCIAL TAXES (KARNATAKA), BANGALORE-CLARIFICATION UNDER SECTION 12 (7) OF THE KARNATAKA TAX ON ENTRY OF GOODS ACT, 1979**

**Sub:** KTEG Act, 1979-clarification on applicability of entry tax on Earthmoving Machineries.

**Ref:** Application dated 06-03-2012 of M/s. Associated Company of Engineers, New Mangalore-575 010, TIN 29110099910.

* * * * * *

In the application cited above M/s. Associated Company of Engineers, Plot No. 159A, Baikampady Industrial Area, New Managalore-575 010 has sought clarification regarding the applicabiltity of entry tax on Earthmoving Machineries.

2. Section 12(7) of the Karnataka Tax on Entry of Goods, Act, 1979 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purpose of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. Hence the following clarification is issued.

**CLARIFICATION NO. KTEG/CR. 32/2011-12, DATED 06-05-2012.**

It is clarified that as per Notification No. FD 4 CET 2006 dated 27-08-2006 entry tax payable under section 4-B(1) on motor vehicles including earthmovers which are adopted for use on road by dealers in motor vehicles registered under KVAT Act, 2003 and liable to pay tax under section 3 of the said Acr is exempted.

The Hon'ble High Court of Karnataka in W.P. No. 39540/2003 vide order dated 24-07-2009 has quashed section 4-B and 4-BB of KTEG Act, 1979 as unconstitutional. Hence, no entry tax can be levied on motor vehicles brought from outside the State.

**PRADEEP SINGH KHAROLA**
Commissioner of Commercial Taxes,
(Karnataka), Bangalore.

P.R. 663

## BANGALORE METROPOLITAN REGION DEVELOPMENT AUTHORITY

**NOTIFICATION**

**No. BMRDA/EST/37/2005-06, Date : 31-03-2012,**

**ಸರ್ಕಾರದ ಪತ್ರ ಸಂಖ್ಯೆ : ನಅಇ 277 ಬಿಎಂಆರ್ 2010**

In exercise of the powers conferred by section 30 of the Bangalore Metropolitan Region Development Authority Act, 1985 (Karnataka Act 39 of 1985) and with the previous sanction of State Government, the Bangalore Metropolitan Region Development Authority, hereby makes the following Regulations further to amend the Bangalore Metropolitan Region Development Authority (Cadre, Recruitment and conditions of service of Officers and staff) Regulations, 2008, namely :-

**1. Title and commencement.-**(1) Thee Regulations may be called the Bangalore Metropolitan Region Development Authority (Cadre, Recruitment and conditions of service of Officers and Staff) (Amendment) Regulations, 2010.

1. They shall come into force from the date of their publications in the official Gazette.

**2. Amendment of regulation 5 :-**In the Bangalore Metropolitan Region Development Authority (Cadre, Recruitment and conditions of service of officers and staff) Regulations, 2008, (hereinafter referred to as the said regulations) in regulation 5, after clause (5), the following shall be inserted, namely :-

**3. Amendment of regulation 7 :-**In the said regulations, in regulation 7, in sub regulation (1), after clause (10), the following shall be inserted namely :-

``(11) The Karnataka Civil Service (Appointment on Compassionate Grounds) Rules, 1996''.

**Yogendra Tripathi,**
**Metropolitan Commissioner,**
Bangalore Metropolitan Region, Development Authority..

**P.D. 57**

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಹಾಸನ ಉಪವಿಭಾಗ, ಹಾಸನ

**ಪ್ರಕಟಣೆ**

**ಸಂಖ್ಯೆ : ಕಾನಪ/ಎಫ್/ಎಸ್ಆರ್–07/2012 ದಿನಾಂಕ : 27–04–2012.**

| ಅರ್ಜಿದಾರರು | | ಪ್ರತಿವಾದಿಗಳು |
|---|---|---|
| 1. ಅಕರಮ ಆಲಿ @ ಸಕೀರ್ ಆಲಿ ಬಿನ್ ನಬಿಯತ್ ಆಲಿ<br>2. ಲೈಲುಫ ಬಿಬಿ ಕೋಂ ಸಕಿರ್ ಆಲಿ<br>3. ಅಲೆಮ್ಗಿರ್ ಎಸ್. ಕೆ. ಬಿನ್ ಅಕ್ರಮ್ ಆಲಿ<br>ಬಾರ್‌ಕೋಲ್ ಅಂಚೆ, ಮಾಲ್ಡ ಪಿ.ಎಸ್. ಮಾಲ್ಡ ಜಿಲ್ಲೆ, ವೆಸ್ಟ್ ಬೆಂಗಾಲ್ ಸ್ಟೇಟ್. | ವಿರುದ್ಧ | 1. ಮೆ॥ ದೀಪಕ್ ಕೇಬಲ್ಸ್ (ಇಂಡಿಯಾ) ಲಿ.<br>ಡೋರ್ ನಂ. 351/1, ಸಮೃದ್ಧಿ ನಿಲಯ, ಸ್ಪೈಸ್ ಟವರ್ ಹತ್ತಿರ, 2ನೇ ಸ್ಟೇಜ್, ಜಯನಗರ, ಹಾಸನ.<br>2. ಮೆ॥ ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂ. ಲಿ.<br>ನಂ. 10/1, ಕುಕ್ರೇಜ್ ಹೌಸ್, 1ನೇ ಮಹಡಿ, ಕುಮಾರ ಕೃಪಾ ರಸ್ತೆ, ಬೆಂಗಳೂರು. |

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಶ್ರೀ ಜಹಂಗೀರ್ ಆಲಿ ಬಿನ್. ಆಕ್ರಮ್ ಆಲಿ ರವರು ಪ್ರತಿವಾದಿಗಳಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ : 20–12–2011 ರಂದು ಮರಣ ಹೊಂದಿರುತ್ತಾರೆ ಎಂದು ಕಾರ್ಮಿಕ ನಷ್ಟ ಪರಿಹಾರವನ್ನು ಕೋರಿ ಮೇಲ್ಕಂಡ ಮೃತರ ಅವಲಂಬಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗೆ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದು. ಮೇಲೆ ನಿಗಧಿಪಡಿಸಿರುವ ಅವಧಿಯಲ್ಲಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.

**ಹೆಚ್. ಎಲ್. ಗುರುಪ್ರಸಾದ್,**
ಕಾರ್ಮಿಕ ಅಧಿಕಾರಿ ಹಾಗೂ
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಹಾಸನ ಉಪವಿಭಾಗ, ಹಾಸನ.

**ಪಿ.ಆರ್. ನಂ. 600**

**ಜಿಲ್ಲಾಧಿಕಾರಿಗಳವರ ಕಾರ್ಯಾಲಯ, ಕೋಲಾರ ಜಿಲ್ಲೆ, ಕೋಲಾರ**

**ನಂ ಎಲ್ಎನ್‌ಡಿ.ಸಿಆರ್. 202/07-08, ದಿನಾಂಕ : 02-05/2012**

**ವಿಷಯ :** ಕೋಲಾರ ತಾಲ್ಲೂಕು ಕಸಬಾ ಹೋಬಳಿ ಅಮಾನಿಕೆರೆ ಗ್ರಾಮದ ಸ.ನಂ. 5ರಲ್ಲಿ 1-09 ಎಕರೆ ಜಮೀನನ್ನು ಜಿಲ್ಲಾ ನಿರ್ಮಿತಿಕೇಂದ್ರರವರಿಗೆ ಮಂಜೂರು ಮಾಡುವ ಬಗ್ಗೆ.

**ಉಲ್ಲೇಖ :** ಪ್ರಾದೇಶಿಕ ಆಯುಕ್ತರು, ಬೆಂಗಳೂರುರವರ ಪತ್ರ ನಂ. ಎಲ್ಎನ್‌ಡಿ.ಸಿಆರ್. 178/07-08 ದಿನಾಂಕ : 24-02-2012.

2. ತಹಶೀಲ್ದಾರ್ ಕೋಲಾರ ತಾಲ್ಲೂಕು ರವರ ಪತ್ರ ಸಂಖ್ಯೆ ಎಲ್ಎನ್‌ಡಿ. ಸಿಆರ್. 25/11-12, ದಿನಾಂಕ : 16-04-2012.

* * * *

**ಅಧಿಸೂಚನೆ**

**94ನೇ ನಿಯಮ 68(1)ನೇ ಪ್ರಕರಣದ ಮೇರೆಗೆ ಘೋಷಣೆ**

ಸರ್ಕಾರದ ಸ್ವತ್ತಾಗಿರುವ ಹಾಗೂ ಈ ಕೆಳಗೆ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಲಾದ ಕಣಗಳ ಜಾಗ ಜಮೀನು ಸಾರ್ವಜನಿಕ ಉಪಯೋಗಕ್ಕೆ ಸದರಿ ಉದ್ದೇಶಕ್ಕಾಗಿ ಅಗತ್ಯವಿಲ್ಲವೆಂದು ಕಂಡು ಬಂದಿರುವುದರಿಂದ ಈಗ ಕರ್ನಾಟಕ ಭೂ ಕಂದಾಯ ಅಧಿನಿಯಮ 1964ರ 68ನೇ ಪ್ರಕರಣದ (1)ನೇ ಉಪಪ್ರಕರಣದಂತೆ ರಾಜ್ಯ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಪ್ರತ್ಯಾಯೋಜನೆಯಗೊಂಡಿರುವುದರಿಂದ, ಸದರಿ ಅಧಿಕಾರವನ್ನು ಚಲಾಯಿಸಿ ಸದರಿ ಕಣಗಳ ಜಾಗ ಪ್ರದೇಶವು ಸಾರ್ವಜನಿಕ ಉಪಯೋಗಕ್ಕೆ ಅಗತ್ಯವಿಲ್ಲವೆಂದು ಮತ್ತು ಸದರಿ ಕಣಗಳ ಜಾಗ ಜಮೀನಿನ ಮೇಲೆ ಸಾರ್ವಜನಿಕರ ಹಾಗೂ ಎಲ್ಲಾ ವ್ಯಕ್ತಿಗಳ ಹಕ್ಕುಗಳು ಕೊನೆಗೊಳಿಸಲು ಉದ್ದೇಶಿಸಿರುವುದಾಗಿ ಈ ಮೂಲಕ ಘೋಷಿಸುತ್ತೇನೆ.

ಸದರಿ ಕಣಗಳ ಜಾಗ ಪ್ರದೇಶದಲ್ಲಿ ಅಥವಾ ಅದರ ಮೇಲೆ ಹಿತಾಸಕ್ತಿಯುಳ್ಳ ಅಥವಾ ಹಕ್ಕುಳ್ಳ ಅಥವಾ ಈ ಉದ್ದೇಶದಿಂದ ಪ್ರತಿಕೂಲ ಪರಿಣಾಮಕ್ಕೊಳಗಾಗುವ ಸಂಭವವಿರುವ ಇತರೆ ಯಾವುದೇ ಹಿತಾಸಕ್ತಿಯನ್ನು ಹೊಂದಿರುವ ಯಾವನೇ ಸಾರ್ವಜನಿಕನು ಅಥವಾ ಯಾವುದೇ ವ್ಯಕ್ತಿಯು ಈ ಅಧಿಸೂಚನೆಯನ್ನು ಹೊರಡಿಸಿದ 90 (ತ್ತೊಂಬತ್ತು) ದಿನಗಳೊಳಗಾಗಿ ಸದರಿ ಉದ್ದೇಶದ ಬಗ್ಗೆ ತನ್ನ ಆಕ್ಷೇಪಣೆಗಳನ್ನು, ಅಂಥ ಹಿತಾಸಕ್ತಿಯ ಅಥವಾ ಹಕ್ಕಿನ ಸ್ವರೂಪವನ್ನು ಮತ್ತು ಪ್ರತಿಕೂಲ ಪರಿಣಾಮವು ಸಂಭವಿಸಿರಬಹುದಾದ ರೀತಿಯನ್ನು ಮತ್ತು ಅಂಥ ಹಿತಾಸಕ್ತಿ ಅಥವಾ ಹಕ್ಕಿನ ಬಗ್ಗೆ ನಷ್ಟ ಪರಿಹಾರಕ್ಕಾಗಿ ಕ್ಲೈಮು ಮಾಡಲಾದ ಮೊಬಲಗು ಮತ್ತು ವಿವರಗಳನ್ನು ಈ ಕಛೇರಿಗೆ ಲಿಖಿತ ರೂಪದಲ್ಲಿ ತಿಳಿಸತಕ್ಕದ್ದು, ಮತ್ತು ಆಕ್ಷೇಪಣೆಗಳನ್ನು ಮತ್ತು ಕ್ಲೈಮುಗಳನ್ನು ಸದರಿ ಪ್ರಕರಣದಲ್ಲಿ ಉಪಬಂದಿಸಿರುವಂತೆ ಪರಿಶೀಲಿಸಲಾಗುವುದು.

**ಅನುಸೂಚಿ**

| | | |
|---|---|---|
| ಜಿಲ್ಲೆ | : | ಕೋಲಾರ |
| ತಾಲ್ಲೂಕು | : | ಕೋಲಾರ |
| ಹೋಬಳಿ | : | ಕಸಬಾ |
| ಗ್ರಾಮ | : | ಅಮಾನಿಕೆರೆ |

ಸ.ನಂ. 5ರ ಕಣಗಳ ಜಾಗ ಜಮೀನು ವಿಸ್ತೀರ್ಣ 1-09 ಎಕರೆಗೆ ಸಾರ್ವಜನಿಕರ ಹಕ್ಕು ನಿವೃತ್ತಿಗಾಗಿ ಪ್ರಸ್ತಾಪಿಸಲಾಗಿದೆ.

**ಚೆಕ್ಕುಬಂದಿ**

| | | |
|---|---|---|
| ಪೂರ್ವಕ್ಕೆ | : | ಸರ್ಕಾರಿ ಕೋಡಿಕಾಲುವೆ |
| ಪಶ್ಚಿಮಕ್ಕೆ | : | ಸ.ನಂ. 3 ಮತ್ತು 4ರ ಜಮೀನು |
| ಉತ್ತರಕ್ಕೆ | : | ಸರ್ಕಾರಿ ಕಾಲುವೆ |
| ದಕ್ಷಿಣಕ್ಕೆ | : | ಕೋಲಾರ-ಮುಳಬಾಗಿಲು ರಸ್ತೆ |

. . . . . . . . . . . .

ಜಿಲ್ಲಾಧಿಕಾರಿಗಳು,

ಕೋಲಾರ ಜಿಲ್ಲೆ.

**ಪಿ.ಆರ್. 614**

## ಕಂದಾಯ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ : ಕಂಇ 22 ಎಲ್‌ಆರ್‌ಎಂ 2012, ಬೆಂಗಳೂರು, ದಿನಾಂಕ : 28ನೇ ಏಪ್ರಿಲ್, 2012.**

ಕಾವೇರಿ ಎಜುಕೇಷನ್ ಅಂಡ್ ರಿಸರ್ಚ ಟ್ರಸ್ಟ್ (ರಿ), ಮಂಡ್ಯ ಇವರಿಗೆ ಮಂಡ್ಯ ಜಿಲ್ಲೆ, ಮಂಡ್ಯ ತಾಲ್ಲೂಕು, ಕೊತ್ತತ್ತಿ ಹೋಬಳಿ, ಸುಂಡಹಳ್ಳಿ ಗ್ರಾಮದ ಸ.ನಂ. 193/1 ಇತರೆಗಳಲ್ಲಿ ಒಟ್ಟು 4 ಎಕರೆ 10 ಗುಂಟೆ ಹಾಗೂ ಇಂಡವಾಳು ಗ್ರಾಮದ ಸ.ನಂ. 299 ಮತ್ತು ಇತರೆಗಳಲ್ಲಿ 1 ಎಕರೆ 33 ಗುಂಟೆ ಒಟ್ಟು 06 ಎಕರೆ 03 ಗುಂಟೆ ಜಮೀನು ಮಾತ್ರ ತರಿ ಜಮೀನು ಶೈಕ್ಷಣಿಕ ಉದ್ದೇಶಕ್ಕಾಗಿ ಖರೀದಿಸಲು ನಮೂನೆ 15–ಎ ಮತ್ತು ನಮೂನೆ 15–ಎಎರಲ್ಲಿ ಸಲ್ಲಿಸಿರುವ ಮಾಹಿತಿ ಆಧರಿಸಿ, ಜಿಲ್ಲಾಧಿಕಾರಿ, ಮಂಡ್ಯ ಇವರ ಪತ್ರ ಸಂಖ್ಯೆ : ಎಲ್‌ಆರ್‌ಎಫ್ 50/2011–12 ದಿನಾಂಕ : 02–02–2012 ರಲ್ಲಿ ಪ್ರಸ್ತಾಪಿತ ಜಮೀನನ್ನು ಕರ್ನಾಟಕ ಭೂ ಸುಧಾರಣಾ ಅಧಿನಿಯಮ (1961)ರ ಕಲಂ 109 (1) (ii) ರಡಿ ಅನುಮತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಜಮೀನು ಕರ್ನಾಟಕ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್) ಅಧಿನಿಯಮ (1978) ಕರ್ನಾಟಕ ಭೂ ಮಂಜೂರಾತಿ ನಿಯಮಗಳು (1969) ಹಾಗೂ ಇನ್ನಿತರ ಪರಭಾರೆ ನಿಷೇಧ ಅಧಿನಿಯಮ ಇವುಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಸಾರ್ವಜನಿಕ ಹಿತಾಸಕ್ತಿಯ ಮೇಲೆ ಕಾರಣಗಳನ್ನು ದಾಖಲಿಸಿ ನಿರ್ದಿಷ್ಟ ಉದ್ದೇಶಕ್ಕಾಗಿ ಭೂಮಿಯನ್ನು ಷರತ್ತು ಮತ್ತು ನಿಬಂಧನೆ ವಿಧಿಸಿ ಕರ್ನಾಟಕ ಭೂ ಸುಧಾರಣಾ ಅಧಿನಿಯಮ (1961)ದ ಕಲಂ 63, 79ಎ, 79ಬಿ ಅಥವಾ 80ರ ಅವಕಾಶಗಳಿಂದ ವಿನಾಯಿತಿ ನೀಡಲು ಅಧಿನಿಯಮದ ಕಲಂ 109(1)ರಡಿ ಅವಕಾಶ ಕಲ್ಪಿಸಿದೆ.

ಕರ್ನಾಟಕ ಭೂ ಸುಧಾರಣಾ ಅಧಿನಿಯಮ (1961)ರ ಕಲಂ 109(1ಎ) ಹಾಗೂ ಕರ್ನಾಟಕ ಭೂ ಸುಧಾರಣಾ ನಿಯಮಗಳ (1964) ನಿಯಮ 38–ಬಿ & 38–ಸಿ ರಲ್ಲಿನ ಷರತ್ತುಗಳನ್ನು ಪೂರೈಸಿದ್ದು ಕರ್ನಾಟಕ ಭೂ ಸುಧಾರಣಾ ಅಧಿನಿಯಮ (1961)ದ ಕಲಂ 63, 79ಎ, 79ಬಿ, ಅಥವಾ 80 ಕ್ಕೆ ವಿನಾಯಿತಿ ನೀಡಿ ಕಾವೇರಿ ಎಜುಕೇಷನ್ ಅಂಡ್ ರಿಸರ್ಚ ಟ್ರಸ್ಟ್ (ರಿ), ಮಂಡ್ಯ ಇವರಿಗೆ ಮಂಡ್ಯ ಜಿಲ್ಲೆ, ಮಂಡ್ಯ ತಾಲ್ಲೂಕು, ಕೊತ್ತತ್ತಿ ಹೋಬಳಿ, ಸುಂಡಹಳ್ಳಿ ಗ್ರಾಮದ ಸ.ನಂ. 193/1 ಇತರೆಗಳಲ್ಲಿ ಒಟ್ಟು 4 ಎಕರೆ 10 ಗುಂಟೆ ಹಾಗೂ ಇಂಡವಾಳು ಗ್ರಾಮದ ಸ.ನಂ. 299 ಮತ್ತು ಇತರೆಗಳಲ್ಲಿ 1 ಎಕರೆ 33 ಗುಂಟೆ ಒಟ್ಟು 06–ಎಕರೆ 03 ಗುಂಟೆ ಜಮೀನು ಮಾತ್ರ ತರಿ ಜಮೀನು ಶೈಕ್ಷಣಿಕ ಉದ್ದೇಶಕ್ಕಾಗಿ ಖರೀದಿಸಲು ಕರ್ನಾಟಕ ಭೂ ಸುಧಾರಣಾ ಅಧಿನಿಯಮ (1961)ರ ಕಲಂ 109 (1)(ii)ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಸರ್ಕಾರದ ಅನುಮತಿ ನೀಡಲಾಗಿದೆ :–

(1) ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷಗಳೊಳಗಾಗಿ ಉಪಯೋಗಿಸತಕ್ಕದ್ದು ಈ ಕುರಿತಂತೆ ಸಂಬಂಧಪಟ್ಟ ಜಿಲ್ಲಾಧಿಕಾರಿ ಮುಖಾಂತರ ಸರ್ಕಾರಕ್ಕೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.

(2) ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ, ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ, 1956ರ ಕಲಂ 3 ರಲ್ಲಿ ಹೇಳಿರುವಂತೆ ಶೇಕಡ 51 ಪೇಯ್ಡ್ ಅಪ್ ಷೇರು ಬಂಡವಾಳ ಹೊಂದಿದ ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ನಿಯಂತ್ರಿತ ಅಥವಾ ಎರಡರ ಹಿಡಿತ ಹೊಂದಿರುವ ಸರ್ಕಾರದ ಸಂಘ/ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದಲ್ಲ.

(3) ಈ ಅನುಮತಿಯು ಕರ್ನಾಟಕ ಭೂ ಸುಧಾರಣೆ ಅಧಿನಿಯಮ, (1961)ರ ಕಲಂ 109 ರನ್ವಯ ವಿನಾಯಿತಿ ಮಾತ್ರವಾಗಿರುತ್ತದೆ. ಬೇರೆ ಯಾವುದೇ ಕಾನೂನು ಉಲ್ಲಂಘನೆಯಾದಲ್ಲಿ ಸಂಬಂಧಪಟ್ಟ ಅಧಿನಿಯಮದ ಅಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

(4) ಸದರಿ ಜಮೀನನ್ನು ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಕರ್ನಾಟಕ ಭೂ ಕಂದಾಯ ಅಧಿನಿಯಮ, (1964)ರ ಕಲಂ 95ರ ಮೇರೆಗೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯತಕ್ಕದ್ದು.

(5) ಪ್ರಸ್ತಾಪಿತ ಜಮೀನುಗಳಲ್ಲಿ ಯಾವುದೇ ಅಭಿವೃದ್ಧಿ ಕಾರ್ಯ ಕೈಗೊಳ್ಳುವ ಮೊದಲು ಜಮೀನಿನ ವಿನ್ಯಾಸಕ್ಕೆ ನಗರ ಯೋಜನಾ ಇಲಾಖೆ/ಅಭಿವೃದ್ಧಿ ಪ್ರಾಧಿಕಾರಿ/ಸ್ಥಳೀಯ ಪ್ರಾಧಿಕಾರಗಳಿಂದ ಅನುಮೋದನೆ ಪಡೆಯತಕ್ಕದ್ದು.

(6) ಜಮೀನು ನಗರಾಭಿವೃದ್ಧಿ ಪ್ರಾಧಿಕಾರದ ಸಿ.ಡಿ.ಪಿ/ಒ.ಡಿ.ಪಿ ವ್ಯಾಪ್ತಿಯೊಳಗೆ ಬಂದರೆ, ಅದರಂತೆ ಅನುಮತಿ ಪಡೆದು ಉಪಯೋಗಿಸತಕ್ಕದ್ದು.

(7) ಸಂಸ್ಥೆ ನಡೆಸುವ ಚಟುವಟಿಕೆಗಳು ಸ್ಥಳೀಯ ಕಾನೂನು, ಕರ್ನಾಟಕ ಮತ್ತು ಭಾರತದ ಕಾನೂನುಗಳನ್ನು ಪಾಲಿಸತಕ್ಕದ್ದು.

ಸಂಸ್ಥೆ ನಡೆಸುವ ಚಟುವಟಿಕೆಗಳು ಸ್ಥಳೀಯ ಕಾನೂನು, ಕರ್ನಾಟಕ ಮತ್ತು ಭಾರತದ ಕಾನೂನುಗಳನ್ನು ಪಾಲಿಸತಕ್ಕದ್ದು. ಮೇಲಿನ ಯಾವುದೇ ಷರತ್ತು ಉಲ್ಲಂಘನೆಯಾದಲ್ಲಿ ಈಗ ನೀಡಲಾಗಿರುವ ಅನುಮತಿಯನ್ನು ಕಾನೂನು ರೀತ್ಯ ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಿಕೊಳ್ಳಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ. ಎನ್. ಶ್ರೀನಿವಾಸ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂ ಸುಧಾರಣೆ).

**ಪಿ.ಆರ್. 619**

## ಕರ್ನಾಟಕ ವಿಧಾನಸಭೆಯ ಸಚಿವಾಲಯ, ಬೆಂಗಳೂರು.

**ಸಂಖ್ಯೆ : ವಿಸಸ/ಶಾರಶಾ/24/ಸಿಎ/2011, ದಿನಾಂಕ : 03–05–2012**

ವಿಷಯ : ವಿಧಾನಸಭಾ ಸದಸ್ಯರ ವಿಳಾಸ ಬದಲಾವಣೆ.

* * * *

ಶಿವಾಜಿನಗರ, ವಿಧಾನಸಭಾ ಕ್ಷೇತ್ರದ ಮಾನ್ಯ ಸದಸ್ಯರಾದ ಶ್ರೀ ಆರ್. ರೋಷನ್‌ಬೇಗ್ ಅವರು ಕೆಳಕಂಡಂತೆ ತಮ್ಮ ವಿಳಾಸವನ್ನು ಬದಲಾಯಿಸಿರುತ್ತಾರೆ.

ಶ್ರೀ ಆರ್. ರೋಷನ್‌ಬೇಗ್,
ವಿಧಾನಸಭಾ ಸದಸ್ಯರು,
ನಂ. 3, ಕ್ಲೀವ್‌ಲ್ಯಾಂಡ್ ರಸ್ತೆ, ಫ್ರೇಜರ್ ಟೌನ್,
ಬೆಂಗಳೂರು–560 005

ಆದಕಾರಣ, ಮಾನ್ಯ ಸದಸ್ಯರಿಗೆ ಇನ್ನು ಮುಂದೆ ಕಳುಹಿಸಲಾಗುವ ಎಲ್ಲಾ ಕಾಗದ ಪತ್ರಗಳನ್ನು ಮೇಲ್ಕಂಡ ವಿಳಾಸಕ್ಕೆ ಕಳುಹಿಸಿಕೊಡಬೇಕೆಂದು ಕೋರಲು ನಿರ್ದೇಶಿತಳಾಗಿದ್ದೇನೆ.

ತಮ್ಮ ವಿಶ್ವಾಸಿ,
**ಎಂ. ಕೆ. ವಿಶಾಲಾಕ್ಷಿ,**
ಅಧೀನ ಕಾರ್ಯದರ್ಶಿ,
ಕರ್ನಾಟಕ ವಿಧಾನಸಭೆ.

**ಪಿ.ಆರ್. 620**

## ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರ ಕಛೇರಿ ನಡವಳಿಗಳು, ಬೆಂಗಳೂರು

**ವಿಷಯ:** ಶ್ರೀಮತಿ ಎಂ. ಎನ್. ರಂಜನಾರಾವ್, ಸಹಾಯಕ ಸರ್ಕಾರಿ ಅಭಿಯೋಜಕರು –ವ– ಸಹಾಯಕ ಸರ್ಕಾರಿ ವಕೀಲರು, ಸಿ.ಜೆ. (ಕಿವಿ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಕೆ. ಆರ್. ಪೇಟೆ (ಹಾಲಿ ಅಮಾನತ್ತಿನಲ್ಲಿರುವವರು), ಇವರ ಅಮಾನತ್ತನ್ನು ರದ್ದುಪಡಿಸಿ ಸೇವೆಗೆ ಪುನರ್ ನಿಯುಕ್ತಿಗೊಳಿಸುವ ಬಗ್ಗೆ.

**ಉಲ್ಲೇಖ:** 1) ಈ ಕಛೇರಿಯ ಸಮಸಂಖ್ಯೆಯ ಆದೇಶ ದಿನಾಂಕ : 27–04–2011
2) ಅಧಿಕಾರಿಯವರ ಮನವಿ ದಿನಾಂಕ : 26–10–2011
3) ಸರ್ಕಾರದ ಪತ್ರ ಸಂಖ್ಯೆ : ಒಇ 218 ಪಿಪಿಇ 2012, ದಿನಾಂಕ : 17–04–2012.

* * * *

**ಪ್ರಸ್ತಾವನೆ :–**

ಶ್ರೀಮತಿ ಎಂ. ಎನ್. ರಂಜನಾರಾವ್, ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಕೆ.ಆರ್. ಪೇಟೆ, ಇವರನ್ನು ಲೋಕಾಯುಕ್ತ ಪ್ರಕರಣಕ್ಕೆ ಸಂಬಂಧಿಸಿದಂತೆ ಉಲ್ಲೇಖ (1)ರ ಆದೇಶದಲ್ಲಿ ಅಮಾನತ್ತಿನಲ್ಲಿಡಲಾಗಿತ್ತು. ಸದರಿಯವರು ಉಲ್ಲೇಖ (2)ರ ಮನವಿಯಲ್ಲಿ, ಅವರ ಅಮಾನತ್ತನ್ನು ರದ್ದುಪಡಿಸಿ, ಸೇವೆಗೆ ಪುನರ್ ನೇಮಕ ಮಾಡುವಂತೆ ಕೋರಿರುತ್ತಾರೆ. ಸರ್ಕಾರದ ಉಲ್ಲೇಖ (3)ರ ಪತ್ರದಲ್ಲಿ, ಅಧಿಕಾರಿಯವರ ಅಮಾನತ್ತನ್ನು ತೆರವುಗೊಳಿಸಿ, ಘಟನಾ ಸ್ಥಳ ಹೊರತುಪಡಿಸಿ, ಬೇರೆ ಯಾವುದಾದರೂ ಖಾಲಿ ಇರುವ ನಾನ್–ಎಕ್ಸಿಕ್ಯೂಟೀವ್ ಹುದ್ದೆಗೆ

ಪುನರ್ ಸ್ಥಾಪಿಸಲು ಅನುಮೋದನೆಯನ್ನು ನೀಡಲಾಗಿದೆ. ಆದರೆ ಈ ಇಲಾಖೆಯ ಸಹಾಯಕ ಸರ್ಕಾರಿ ಅಭಿಯೋಜಕರ ವೃಂದದ ಹುದ್ದೆಗಳಲ್ಲಿ ನಾನ್–ಎಕ್ಸಿಕ್ಯೂಟೀವ್ ಹುದ್ದೆ ಇರುವುದಿಲ್ಲ. ಆದ್ದರಿಂದ, ಸದರಿಯವರ ಅಮಾನತ್ತನ್ನು ರದ್ದುಪಡಿಸಿ ಸೇವೆಗೆ ಪುನರ್ ನಿಯುಕ್ತಿಗೊಳಿಸುವ ಸಂಬಂಧ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸಂಖ್ಯೆ : ಡಿಪಿಎನ್ : ಸಿಶಾ1–ಎ : 16 : 2011–12, ಬೆಂಗಳೂರು, ದಿನಾಂಕ : 28ನೇ ಏಪ್ರಿಲ್ 2012**

ಶ್ರೀಮತಿ ಎಂ. ಎನ್. ರಂಜನಾರಾವ್, ಸಹಾಯಕ ಸರ್ಕಾರಿ ಅಭಿಯೋಜಕರು –ವ– ಸಹಾಯಕ ಸರ್ಕಾರಿ ವಕೀಲರು, ಸಿ.ಜೆ. (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಕೆ. ಆರ್. ಪೇಟೆ, (ಹಾಲಿ ಅಮಾನತ್ತಿನಲ್ಲಿರುವವರು), ಇವರ ವಿರುದ್ಧ ಲೋಕಾಯುಕ್ತ ಮೊಕದ್ದಮೆ ಬಾಕಿಯಿರಿಸಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ 10ನೇ ನಿಯಮದ ಉಪನಿಯಮ 5(ಸಿ) ರೀತ್ಯಾ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಅವರ ಅಮಾನತ್ತನ್ನು ರದ್ದುಪಡಿಸಿ, ಅರಕಲಗೂಡಿನ ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯದಲ್ಲಿ ಖಾಲಿ ಇರುವ ಸಹಾಯಕ ಸರ್ಕಾರಿ ಅಭಿಯೋಜಕರು –ವ– ಸಹಾಯಕ ಸರ್ಕಾರಿ ವಕೀಲರ ಹುದ್ದೆಗೆ ಪುನರ್ ನಿಯುಕ್ತಿಗೊಳಿಸಲಾಗಿದೆ ಹಾಗೂ ಸದರಿ ಹುದ್ದೆಯ ಸಂಪೂರ್ಣ ಪ್ರಭಾರವನ್ನು ಶ್ರೀ ಹೆಚ್. ಎಸ್. ಲೋಹಿತಾಶ್ವಾಚಾರ್, ಸಹಾಯಕ ಸರ್ಕಾರಿ ಅಭಿಯೋಜಕರು –ವ– ಸಹಾಯಕ ಸರ್ಕಾರಿ ವಕೀಲರು, ಸಿ.ಜೆ (ಹಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಅರಕಲಗೂಡು, ಅವರಿಂದ ವಹಿಸಿಕೊಳ್ಳಲು ಸೂಚಿಸಲಾಗಿದೆ.

ಸದರಿ ಅಧಿಕಾರಿಯವರು ಕಛೇರಿಗೆ ಸಂಬಂಧಪಟ್ಟಂತೆ ಗ್ರಂಥಾಲಯ, ಪೀಠೋಪಕರಣಗಳು, ಕಡತಗಳು ಮತ್ತು ವಹಿಗಳು ಇತ್ಯಾದಿಗಳನ್ನು ಒಳಗೊಂಡಂತೆ ವಿವರವಾದ ಪ್ರಭಾರವನ್ನು ವಹಿಸಿಕೊಂಡು, ಅವುಗಳ ಒಂದು ಪ್ರತಿಯನ್ನು ಸಿ.ಟಿ.ಸಿ.ಯೊಂದಿಗೆ ಸಂಬಂಧಪಟ್ಟ ವಿಭಾಗೀಯ ಕಛೇರಿಗೆ ಸಲ್ಲಿಸುವುದು. ಪ್ರಭಾರ ವಹಿಸಿಕೊಂಡ ಬಗ್ಗೆ ಸಿ.ಟಿ.ಸಿ.ಯನ್ನು ಮಾತ್ರ ಕವಚ ಪತ್ರದೊಂದಿಗೆ ಈ ಕಛೇರಿಗೆ ಸಲ್ಲಿಸುವುದು. ಯಾವುದಾದರೂ ಗ್ರಂಥಾಲಯ ಪುಸ್ತಕ ಹಾಗೂ ವಸ್ತುಗಳು ಕಾಣೆಯಾಗಿದ್ದಲ್ಲಿ ಅಥವಾ ಹಾಳಾಗಿದ್ದಲ್ಲಿ ಪ್ರತ್ಯೇಕ ವರದಿಯನ್ನು ವಿಭಾಗೀಯ ಕಛೇರಿಗೆ ಕೂಡಲೇ ಸಲ್ಲಿಸುವುದು ಇಲ್ಲದಿದ್ದಲ್ಲಿ, ಪ್ರಭಾರವನ್ನು ವಹಿಸಿಕೊಳ್ಳುವ ಅಧಿಕಾರಿಯವರೇ ಅಂತಹ ಪುಸ್ತಕ ಹಾಗೂ ವಸ್ತುಗಳಿಗೆ ಜವಾಬ್ದಾರರಾಗಿರುತ್ತಾರೆ.

**ಹೆಚ್. ಆರ್. ರೇಣುಕ,**
ಅಭಿಯೋಗ ಮತ್ತು ಸರ್ಕಾರಿ,
ವ್ಯಾಜ್ಯಗಳ ನಿರ್ದೇಶಕರು, ಬೆಂಗಳೂರು.

ಪಿ.ಆರ್. 631

## Commercial Taxes Department

### PROCEEDINGS OF THE COMMISSIONER OF COMMERCIAL TAXE, (KARNATAKA), BANGALORE-CLARIFICATION UNDER SECTION 59 (4) OF THE KARNATAKA VALUE ADDED TAX ACT-2003.

**Sub:** KVAT Act, 2003-Clarification under Section 59(4) regarding the rate of tax applicable on certain goods.-regarding.

**Ref:** Application dated : 09-12-2011 of M/s. DEV INC., Bangalore-560 027. TIN No. 29310748342.

* * * * * *

In the application cited above of M/s. Dev Inc., No. 16, H. Siddaiah Road, Bangalore-560 027 has sought clarification regarding the rate of tax applicable on `certain commodities'.

2. Section 59(4) of the Karnataka Value Added, Tax Act, 2003 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purpose of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. Hence the following clarification is issued.

**CLARIFICATION NO. CLR. CR. 194/11-12, DATED 23-04-2012.**

| Sl. No. | Goods | CET Code | Rate of tax/Section |
|---|---|---|---|
| 1. | Cremfil Silk Lemon | 17049090 | 14% under Section 4(1)(b) of the Karnataka Value Added Tax Act, 2003. |
| 2. | Cremfil Classic Vanilla | | |

| Sl. No. | Goods | CET Code | Rate of tax/Section |
|---|---|---|---|
| 3. | Cremfil Silk Blueberry | | |
| 4. | Cremfil Silk Strawberry | | |
| 5. | Cremfil Silk Mango | | |
| 6. | Cremfil Silk Pineapple | | |
| 7. | Cremfil Silk Orange | | |
| 8. | Bavorais Gelatine Free Mousse Mix | 19019090 | 14% under Section 4(1)(b) of the Karnataka Value Added Tax Act, 2003. |
| 9. | Easy Masala | | |
| 10. | Easy Brown Bread | | |
| 11. | Easy Multigrain | | |
| 12. | Tigris Bread Improver | | |
| 13. | S500 | | |
| 14. | Tegral Sponge Egg Free | | |
| 15. | Satin Cream Cake | | |
| 16. | Satin Egg free Cake mix | | |
| 17. | Easy Sponge Egg Free | 04049000 | 14% under Section 4(1)(b) of the Karnataka Value Added Tax Act, 2003. |
| 18. | Tegral Gel | 21069099 | 14% under Section 4(1)(b) of the Karnataka Value Added Tax Act, 2003. |

**PRADEEP SINGH KHAROLA**
Commissioner of Commercial Taxes,
(Karnataka), Bangalore.

**P.R. 633**

**ವಾಣಿಜ್ಯ ತೆರಿಗೆಗಳ ಆಯುಕ್ತರವರ ಕಛೇರಿ, 1ನೇ ಮುಖ್ಯ ರಸ್ತೆ, ಗಾಂಧಿನಗರ, ಬೆಂಗಳೂರು.**

**ಅಧಿಸೂಚನೆ**

**ಸಂಖ್ಯೆ : ಇ.ಜಿ–1/ಸಿಆರ್–04/2012–13, ಬೆಂಗಳೂರು, ದಿನಾಂಕ : 27ನೇ ಏಪ್ರಿಲ್, 2012.**

2003ರ ಕರ್ನಾಟಕ ಮೌಲ್ಯ ವರ್ಧಿತ ತೆರಿಗೆ ಅಧಿನಿಯಮದ ಪ್ರಕರಣ 25ರ ಉಪಪ್ರಕರಣ (1)ರ ಎರಡನೆಯ ಪರಂತುಕದೊಂದಿಗೆ 2005ರ ಕರ್ನಾಟಕ ಮೌಲ್ಯವರ್ಧಿತ ತೆರೆಗೆ ನಿಯಮಗಳಡಿಯ ನಿಯಮ 50ರ ಉಪನಿಯಮ (1)ರ ಕಂಡಿಕೆ (ಎ)ನ ಮೊದಲನೆಯ ಪರಂತುಕಗಳಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಅಧಿಸೂಚನೆ ಸಂಖ್ಯೆ ಇಜಿ–1 ಸಿಆರ್/33/2011–12, ದಿನಾಂಖ : 19–10–2011 ಅನ್ನು ರದ್ದುಪಡಿಸುತ್ತಾ ಈ ಮೂಲಕ ಅಧಿಸೂಚಿಸುವುದೇನೆಂದರೆ, 2012ರ ಜೂನ್ ಮೊದನೆಯ ದಿನದಿಂದ ಅನ್ವಯವಾಗುವಂತೆ ಸದರಿ ಅಧಿನಿಯಮ ಅಥವಾ ನಿಯಮಗಳಡಿಯಲ್ಲಿ ಇಪ್ಪತ್ತೈದು ಸಾವಿರ ರೂಪಾಯಿಗಳಿಕ್ಕಿಂತ ಹೆಚ್ಚಿನ ಮೊತ್ತದ ತೆರಿಗೆ ಅಥವಾ ಯಾವುದೇ ಮೊಬಲಗು ಸಂದಾಯ ಮಾಡುವ ಸದರಿ ಅಧಿನಿಯಮದಡಿಯಲ್ಲಿ ನೋಂದಾಯಿತನಾದ ಪ್ರತಿಯೊಬ್ಬ ವ್ಯಾಪಾರಿಯು ಅಂತಹ ಮೊಬಲಗುನ್ನು ಇಂಟರ್‌ನೆಟ್ ಮೂಲಕ ವಿದ್ಯುನ್ಮಾನ ಪಾವತಿ ರೂಪದಲ್ಲಿ ಈ ಕೆಳಕಂಡ ವಿಧಾನದಲ್ಲಿ ಸಂದಾಯ ಮಾಡತಕ್ಕದ್ದು.

i. ವಿದ್ಯುನ್ಮಾನ ಪಾವತಿ ಮಾಡಲು ಬಾಧ್ಯನಾದ ವ್ಯಾಪಾರಿಯು ಜಾಲತಾಣ (website) https://vat.kar.nic.in/epay ಅನ್ನು ತೆರೆಯಬೇಕು ಅಥವಾ ಜಾಲತಾಣ http://ctax.kar.nic.in ನಲ್ಲಿ `e-Payment (All Acts)' ಎನ್ನುವ ಸಂಪರ್ಕದ ಮೇಲೆ ಕ್ಲಿಕ್ ಮಾಡಬೇಕು. ಸದರಿ ಜಾಲತಾಣ ಮುಕ್ತ ಜಾಲತಾಣವಾಗಿದ್ದು ಬಳಕೆದಾರನ ಅಧಿಕೃತತೆಯ ಅವಶ್ಯವಿರುವುದಿಲ್ಲ.

ii. ಮುಖ್ಯ ಪರದೆಯ ಮೇಲೆ ಪ್ರದರ್ಶಿತವಾಗುವ ಒಂಬತ್ತು ತೆರಿಗೆಗಳ ಪಟ್ಟಿಯಲ್ಲಿ ಕರ್ನಾಟಕ ಮೌಲ್ಯ ವರ್ಧಿತ ತೆರಿಗೆ ಅಧಿನಿಯಮವನ್ನು ತೆರಿಗೆ ಪ್ರವರ್ಗವೆಂದಾಗಿ ಆಯ್ಕೆ ಮಾಡಿ ಅದರ ಮೇಲೆ ಕ್ಲಿಕ್ ಮಾಡಿ.

iii. ನಿಮ್ಮ TIN ನಮೂದಿಸಿರಿ. ಸಂಬಂಧಿತ ತಂತ್ರಾಂಶ ಸದರಿ TIN ನ ಸಿಂಧುತ್ವವನ್ನು ಖಚಿತಪಡಿಸಿಕೊಳ್ಳುತ್ತದೆ ಮತ್ತು ವ್ಯಾಪಾರಿಯ ವ್ಯವಹಾರದ ಹೆಸರು, ವಿಳಾಸ ಮತ್ತು ಅವನು/ಅವಳು ನೋಂದಾಯಿತರಾದ ಕಛೇರಿನಂತಹ ವಿವರಗಳು ತಂತಾನೇ ಪ್ರದರ್ಶಿತವಾಗುತ್ತವೆ.

iv) ತೆರಿಗೆ ಅವಧಿ, ತೆರಿಗೆ ಅಥವಾ ಇತರೆ ಮೊತ್ತ, ಬಡ್ಡಿ, ದಂಡ ಮುಂತಾದ ವಿವರಗಳನ್ನು ನಿಗದಿ ಮಾಡಿರುವ ಸಂಬಂಧಿತ ಆವರಣಗಳಲ್ಲಿ ನಮೂದಿಸಿ.

v. ವ್ಯಾಪಾರಿಯು ನೆಟ್‌ಬ್ಯಾಂಕಿನ ಸೌಲಭ್ಯವಿರುವ ಖಾತೆ ಹೊಂದಿದ ಮತ್ತು ಇ–ಪಾವತಿಗೆ ಸಮರ್ಥಗೊಳಿಸಿದ ಬ್ಯಾಂಕ್‌ಗಳಲ್ಲಿ ಒಂದನ್ನು ಜಾರುಪಟ್ಟಿ (Drop down list) ಯಿಂದ ಆಯ್ಕೆ ಮಾಡಿ ಮತ್ತು `NEXT' ಎನ್ನುವುದರ ಮೇಲೆ ಕ್ಲಿಕ್ ಮಾಡಿ.

vi. ಗಣಕಯಂತ್ರದ ಮುಖ್ಯ ಪರದೆಯ ಮೇಲೆ ಪ್ರದರ್ಶಿತವಾಗುವ ವಿವರಗಳನ್ನು ಪರಿಶೀಲಿಸಿ ಮತ್ತು ಅಂತಹ ವಿವರಗಳನ್ನು ದೃಢೀಕರಿಸಿಕೊಂಡ ನಂತರ, `submit' ಎನ್ನುವುದರ ಮೇಲೆ ಕ್ಲಿಕ್ ಮಾಡಿ. ಈ ವಿವರಗಳನ್ನು ಗಣಕಯಂತ್ರ ವ್ಯವಸ್ಥೆ ದಾಖಲಿಸುತ್ತದೆ ಹಾಗೂ ವಾಣಿಜ್ಯ ತೆರಿಗೆ ಇಲಾಖೆಯ ಉಲ್ಲೇಖ ಸಂಖ್ಯೆ (CTD Reference Number) ಎಂದು ಕರೆಯಲಾಗುವ ಒಂದು ವಿಶಿಷ್ಟ ಸಂಖ್ಯೆ ಉತ್ಪಾದನೆ ಆಗಿ ಪ್ರದರ್ಶಿತವಾಗುತ್ತದೆ. ಈ ವಿಶಿಷ್ಟ ಸಂಖ್ಯೆಯನ್ನು ಭವಿಷ್ಯದ ಬಳಕೆಗಾಗಿ ಬರೆದಿಟ್ಟುಕೊಳ್ಳತಕ್ಕದ್ದು.

vii. ನಂತರ ಗಣಕಯಂತ್ರ ವ್ಯವಸ್ಥೆಯು ನಮೂದಿತ ಪಾವತಿ ಮೊತ್ತದ ವಿವರಗಳನ್ನು ಆಯ್ಕೆ ಮಾಡಿದ ಬ್ಯಾಂಕ್‌ನ ಜಾಲತಾಣಕ್ಕೆ ವರ್ಗಾಯಿಸುತ್ತದೆ ಮತ್ತು ಆ ಬ್ಯಾಂಕ್‌ನ ಜಾಲತಾಣವನ್ನು ತೆರೆಯುತ್ತದೆ.

viii. ಬ್ಯಾಂಕಿನ ಜಾಲತಾಣಧ ಸಂಪರ್ಕ ಪುಟವು ತೆರೆದುಕೊಳ್ಳುತ್ತದೆ. ವ್ಯಾಪಾರಿಯು ತನ್ನ ವಿವರಗಳನ್ನು ಮತ್ತು ಅಂತಹ ಬ್ಯಾಂಕ್ ಒದಗಿಸಿದ 'ಬಳಕೆದಾರನ ಹೆಸರು' ಮತ್ತು 'ಸಂಕೇತ ಪದ'ಗಳನ್ನು ಉಪಯೋಗಿಸಿ ಅದನ್ನು ಅಧಿಕೃತಗೊಳಿಸತಕ್ಕದ್ದು.

ix. ಈಗ ಬ್ಯಾಂಕಿನ ಜಾಲತಾಣವು "ತೆರಿಗೆ ಪ್ರವರ್ಗ" "ಟಿನ್" (TIN) "ವಾಣಿಜ್ಯ ತೆರಿಗೆ ಇಲಾಖೆಯ ಉಲ್ಲೇಖ ಸಂಖ್ಯೆ" (CTD Reference Number) ಮತ್ತು "ಮೋಬಲಗು" (Amount) ಗಳನ್ನು ಪ್ರದರ್ಶಿಸುತ್ತದೆ. ಈ ಹಂತದಲ್ಲಿ ಪಾವತಿ ವಿವರಗಳನ್ನು ಮಾರ್ಪಾಡು ಅವಕಾಶವಿರುವುದಿಲ್ಲ.

x. `Confirm the Payment' ಎನ್ನುವುದರ ಮೇಲೆ ವ್ಯಾಪಾರಿ ಕ್ಲಿಕ್ ಮಾಡಿದ ನಂತರ ಕೋರ್ ಬ್ಯಾಂಕಿಂಗ್ ವ್ಯವಸ್ಥೆಯಲ್ಲಿ ವಹಿವಾಟು ಕೈಗೊಳ್ಳಲಾಗುತ್ತದೆ.

xi. ಪಾವತಿ ಪ್ರಕ್ರಿಯೆ ಪೂರ್ಣಗೊಂಡ ನಂತರ, ಬ್ಯಾಂಕಿನ ಜಾಲತಾಣದ ಸಂಪರ್ಕ ವಾಣಿಜ್ಯ ತೆರೆಗೆ ಇಲಾಖೆಯ ಜಾಲತಾಣಕ್ಕೆ ವರ್ಗಾಯಿಸಲ್ಪಡುತ್ತದೆ. ಬ್ಯಾಂಕ್ ಉಲ್ಲೇಖ ಸಂಖ್ಯೆಯನ್ನು ಒಳಗೊಂಡಂತೆ ಯಶಸ್ವಿ ಪಾವತಿಯ ವಿವರಗಳನ್ನು ಜಾಲತಾಣ https://vat.kar.nic.in/epay ಪ್ರದರ್ಶಿಸುತ್ತದೆ.

vii. 'ಪ್ರಿಂಟ್ ಚಲನ್' (Print Challan) ಎಂಬುದರ ಮೇಲೆ ಕ್ಲಿಕ್ ಮಾಡಿ ಮುದ್ರಿತ ಚಲನ್‌ನ್ನು ಪಡೆಯಬಹುದಾಗಿದೆ.

ಹೆಚ್ಚಿನ ಮಾಹಿತಿಗಾಗಿ ಜಾಲತಾಣ https://vat.kar.nic.in/epay ನಲ್ಲಿ ಅಳವಡಿಸಿದ ಬಳಕೆದಾರರ ಕೈಪಿಡಿಯನ್ನು ನೋಡಬಹುದು.

**ಪ್ರಧೀಪ್ ಸಿಂಗ್ ಖರೋಲ,**
ವಾಣಿಜ್ಯ ತೆರಿಗೆಗಳ ಆಯುಕ್ತರು,
(ಕರ್ನಾಟಕ), ಬೆಂಗಳೂರು.

## DEPATMENT OF COMMERCIAL TAXES

### NOTIFICATION

**No. EGI.CR-4/2012-13, Bangalore, Dated : 27-04-2012.**

In exercise of the powers under the second proviso to sub-section (1) of Section 35 of the Karnataka Value Added Tax Act, 2003 (Karnataka Act 32 of 2004) read with the first proviso to clause (a) of sub-rule (1) of Rule 50 of the Karnataka Value Added Tax Rules, 2005 and in supersession of the Notification No. EGI.CR.33/2011-12, dated 19-10-2011, it is hereby notified with effect from the 1st day of June, 2012, that every dealer registered under the said Act paying an amount of twenty five thousand rupees or more as tax or any other amount due under the said Act or Rules shall pay such amount by electronic remittance through internet in the following manner :-

i. A dealer required to make payment by electronic remittance shall open the website https://vat.kar.nic.in/epay or may click on the link ``e-Payment (All ACTs)'' provided in website http://ctax.kar.nic.in. The website is an open website, no user authentication is required.

ii. Select tax category as KVAT (Karnataka Value Added Tax) from the list of nine categories of tax as displayed on the home page.

iii. Enter the TIN The TIN is validated by the system and details such as Trade Name, address and office of the dealer where he/she is registered are automatically displayed.

iv. Enter other details like Tax Period, Tax or any other Amount, Interest, Penalty, etc., in the respective boxes provided therein.

v. Select one of the banks enabled for e-Payment in which the dealer has an account with net banking facility from a drop down list and click on ``NEXT''.

vi. Verify the entered details displayed by the system and after confirming the details entered, click submit button. The system saves these details and a unique number called the CTD Reference Number is generated and displayed. This number shall be noted down for future use.

vii. The system then passes the payment information entered, to the selected Bank's web-site and opens the Bank website.

viii. The login page of the bank website will be opened and it shall be authenticated by the dealer, entering his credentials, username and password, as provided by the bank.

ix. The bank site now displays the Tax Category, TIN, CTD Reference Number and Amount. There is no provision to alter the payment details at this stage.

x. After the dealer clicks on ``confirm the payment'', the transaction will be carried out in Core Banking System.

xi. After completion of payment process, the banks' web-site link will be transferred to the CTD website. The website, https://vat.kar.nic.in/epay will show the details of successful payment including Bank Reference Number.

xii. A print out of the Chillan can be obtained by clicking on ``Print Challan''.

For further clarification user manual hosted on the website https://vat.kar.nic.in/epay may be referred.

**PRADEEP SINGH KHAROLA,**
Commissioner of Commercial Taxes Karnataka,
Bangalore.

ಪಿ.ಆರ್. 634

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ದ.ಕ. ಉಪವಿಭಾಗ–2

## ಬೆಂದೂರ್‌ವೆಲ್ ವೃತ್ತ, ಕಂಕನಾಡಿ, ಮಂಗಳೂರು ಇವರ ನ್ಯಾಯಾಲಯ

### ಅಧಿಸೂಚನೆ

**ಸಂಖ್ಯೆ : ಡಬ್ಲ್ಯೂಸಿಎ/ಎಸ್.ಆರ್–12/2012(ಎಫ್) ದಿನಾಂಕ : 30–04–2012**

**ಅರ್ಜಿದಾರರು**

1. ಶ್ರೀಮತಿ ಸಾವಿತ್ರಿ ಎಸ್. ರೈ ವಯಸ್ಸು 50 ವರ್ಷ
ಕೋಂ : ಪದ್ಮನಾಭ ರೈ @ ಸಂಜೀವ ರೈ,
ವಯಸ್ಸು 55 ವರ್ಷ

2. ಶ್ರೀಪದ್ಮನಾಭ ರೈ @ ಸಂಜೀವ ರೈ,
ತಂದೆ : ತಿಮ್ಮಯ್ಯ ರೈ
ಪರ್ಚೋಡು ಹೌಸ್, ಕಿನ್ಯಾ ಅಂಚೆ, ಬಲ್ಪ ಗ್ರಾಮ,
ಸುಳ್ಯ ತಾಲ್ಲೂಕು.

**ಪ್ರತಿವಾದಿಗಳು**

1) ಶ್ರೀ ಸುಜಿತ್ ಆಳ್ವ ಪ್ರಾಯ : 45 ವರ್ಷ
ತಂದೆ : ಲೇಟ್ ಕೃಷ್ಣ ಆಳ್ವ
ವಾಸ : ಯೇತಮೊಗರು ಗುತ್ತು ಹೌಸ್,
ಕಂದಾವರ ಗ್ರಾಮ ಮತ್ತು ಅಂಚೆ,
ಮಂಗಳೂರು ತಾಲ್ಲೂಕು.

2) ಓರಿಯೆಂಟಲ್ ಇನ್ಸೂರೆನ್ಸ್ ಕಂ. ಲಿ., 3ನೇ ಮಹಡಿ,
ಕೃಷ್ಣ ಪ್ರಸಾದ್ ಬಿಲ್ಡಿಂಗ್, ಎಂ.ಜಿ. ರಸ್ತೆ ಲಾಲ್ ಬಾಗ್,
ಮಂಗಳೂರು.

ಅರ್ಜಿದಾರರಾದ ಶ್ರೀಮತಿ ಸಾವಿತ್ರಿ ಎಸ್. ರೈ ಇವರು ತನ್ನ ಮಗನಾದ ಪ್ರಜ್ವಲ್ ರೈ, 1ನೇ ಪ್ರತಿವಾದಿಗಳಲ್ಲಿ ಕೆಲಸಗಾರನಾಗಿದ್ದು, ಕೆಲಸದಲ್ಲಿ ನಿರತನಾಗಿದ್ದಾಗ, ದಿನಾಂಕ : 13–12–2011ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ತಿಳಿಸಿ, ಅವಲಂಬಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದುದರಿಂದ, ಈ ವಿಷಯದಲ್ಲಿ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿ, ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆಯು ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಣೆಯಾದ (ಮೂವತ್ತು) 30 ದಿನಗಳೊಳಗಾಗಿ ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗಧಿತ ಸಮಯದಲ್ಲಿ ಈ ನ್ಯಾಯಾಲಯವು ಯಾವುದೇ ಕ್ಲೈಮ್ ಅರ್ಜಿ : ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದೆಂದು ಈ ಮೂಲಕ ತಿಳಿಸಲಾಗಿದೆ.

ಎಂ. ಆನಂದ ಮೂರ್ತಿ,
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ದ.ಕ. ಉಪವಿಭಾಗ–2, ಮಂಗಳೂರು.

**ಪಿ.ಆರ್. 643**

**ಕಾರ್ಮಿಕ ಅಧಿಕಾರಿ ಹಾಗೂ ನೌಕರರ ಪರಿಹಾರ ಆಯುಕ್ತರ ನ್ಯಾಯಾಲಯ, ಉಪ ವಿಭಾಗ–1, ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿಯ ಕಛೇರಿಗಳ ಸಂಕೀರ್ಣ, 2ನೇ ಮಹಡಿ, ಪಿ.ಯು ಕಾಲೇಜ್ ರಸ್ತೆ, ಆರ್. ರಾಜಣ್ಣ ಸರ್ಕಲ್, ತುಮಕೂರು ರಸ್ತೆ ಬಳಿ, ಪೀಣ್ಯ 1ನೇ ಹಂತ, ಬೆಂಗಳೂರು–58.**

**ಪ್ರಕಟಣೆ**

**ಸಂಖ್ಯೆ : ಕಾಅಬೆಂ–1/ಇಸಿಎ/ಎಫ್‌ಸಿ/ಸಿಆರ್–11/2012 ದಿನಾಂಕ : 02–05–2012.**

**ಅರ್ಜಿದಾರರು**

1. ಶ್ರೀಮತಿ ಎಸ್. ಡಿ. ರಾಣಿ ಕೋಂ ಲೇಟ್ ಎಸ್. ಎರ್. ರಾಜು @ ರಾಜುಗೌಡ, ವಯಸ್ಸು–20.
2. ಶ್ರೀ ಎಸ್. ಎನ್. ರಾಮೇಗೌಡ, ಬಿನ್ ಲೇಟ್ ನಾರಾಯಣಗೌಡ, ವಯಸ್ಸು–65.
3. ಶ್ರೀಮತಿ ಮಹಾದೇವಮ್ಮ ಕೋಂ ಎಸ್.ಎನ್ ರಾಮೇಗೌಡ, ನಂ. 46/11, 2ನೇ ಮಹಡಿ, ಪವರ್ ಹುಚ್ಚ ಬಿಲ್ಡಿಂಗ್, ಚೂಕ್ಕಸಂದ್ರ, ಟಿ–ದಾಸರಹಳ್ಳಿ, ಬೆಂಗಳೂರು–560 057.

**ಪ್ರತಿವಾದಿಗಳು**

1. ನ್ಯಾಷನಲ್ ಇನ್ಸೂರೆನ್ಸ್ ಕಂಪನಿ ಲಿಮಿಟೆಡ್, ರೀಜನಲ್ ಆಫೀಸ್ ನಂ. 11, ಸುಬ್ಬರಾಮ್ ಕಾಂಪ್ಲೆಕ್ಸ್, ಎಂ.ಜಿ. ರಸ್ತೆ, ಬೆಂಗಳೂರು.
2. ಶ್ರೀ ಇ. ಬಿ. ಧನಪಾಲ್ ಬಿನ್ ಬೋರಯ್ಯ, ಇಜ್ವಾಲಘಟ್ಟ, ಹೊನಕೆರೆ ಹೋಬಳಿ, ನಾಗಮಂಗಲ ತಾಲ್ಲೂಕ್, ಮಂಡ್ಯ ಜಿಲ್ಲೆ.
3. ಶ್ರೀ ಎನ್. ಬಿ. ಗುರುಪ್ರಸಾದ್ ಬಿನ್ ಬಸವರಾಜು, ಹಳೆ ಅಂಚೆ ಕಛೇರಿ ರಸ್ತೆ, ನಾಗಮಂಗಲ ಟೌನ್ ಮತ್ತು ತಾಲ್ಲೂಕ್, ಮಂಡ್ಯ ಜಿಲ್ಲೆ.
4. ಎ.ಇ.ಇ. ಮಂಗಳೂರು ಎಲೆಕ್ಟ್ರಿಸಿಟಿ ಸಪ್ಲೈ ಕಂ. ಲಿ, (MESCOM) ಮೂಡಿಗೆರೆ ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ.

ಈ ಮೇಲೆ ನಮೂದಿಸಿದ ಅರ್ಜಿದಾರರು ತಾವು ಮೃತ ಶ್ರೀ ಎಸ್. ಆರ್. ರಾಜು @ ರಾಜುಗೌಡ, ಇವರ ಅವಲಂಬಿತರೆಂದು, ಮೃತನು 2ನೇ ಪ್ರತಿವಾದಿಗಳ ಬಳಿ ಚಾಲಕನಾಗಿ ದಿನಾಂಕ : 24–11–2011ರಂದು ಕೆಲಸ ಮಾಡುವಾಗ ಕೆಲಸದ ವೇಳೆಯಲ್ಲಿ ಹಾಗೂ ಕೆಲಸದ ಕಾರಣದಿಂದ ಉಂಟಾದ ಅಪಘಾತದಲ್ಲಿ ಗಾಯಗೊಂಡು ಮರಣ ಹೊಂದಿರುತ್ತಾರೆ ಎಂದು. ಈ ಸಂಬಂಧ ತಮಗೆ ಕಾಯ್ದೆಯ ಅನುಸಾರ ಪ್ರತಿವಾದಿಗಳಿಂದ ಬರತಕ್ಕ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯದ ಮುಂದೆ ಬೇಡಿಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದಕಾರಣ ಸಾರ್ವಜನಿಕರಿಗೆ ಹಾಗೂ ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಅರ್ಜಿದಾರರ ಬೇಡಿಕೆ ಅರ್ಜಿಯ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಮೇಲೆ ನಮೂದಿಸಿರುವ ಅರ್ಜಿದಾರರಲ್ಲದೇ, ತಾವು ಸಹ ಮೃತನ ನಿಜವಾದ **"ಅವಲಂಬಿತರು"** ಎಂದು ಪರಿಗಣಿಸಲು ಕೇಳಿಕೊಳ್ಳುವುದಾದರೇ, ಅಂತಹವರು ಈ ಪ್ರಕಟಣೆಯು ಈ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 (ಮೂವತ್ತು) ದಿನಗಳೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗಧಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಬೇಡಿಕೆ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಆಕ್ಷೇಪಣೆ ಅಥವಥದ ಇ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.

. . . . . . . . . . . . . .
ಕಾರ್ಮಿಕ ಅಧಿಕಾರಿ ಹಾಗೂ ನೌಕರರ ಪರಿಹಾರ ಆಯುಕ್ತರು,
ಉಪ ವಿಭಾಗ–1, ಬೆಂಗಳೂರು.

**ಪಿ.ಆರ್. 615**